# ಹರಪನಹಳ್ಳಿ ಭೀಮವ್ವ

(ಕ್ರಿ ಶ 1823–1903)

ಮಾರಜನಕ ಭೀಮೇಶ ಕೃಷ್ಣನೆ
ಮರೆಯಾಗಿದ್ದರೇನೋ ಮರೆಯದಂತಿರೋ ॥

ಲೇಖಕ

ಜಯಸಿಂಹ

ಪರಿಮಳ ಪ್ರಕಾಶನ

178 19ನೇ ಮುಖ್ಯರಸ್ತೆ, ಶ್ರೀನಗರ,
ಬನಶಂಕರಿ 1ನೇ ಸ್ಟೇಜ್, 2ನೇ ಬ್ಲಾಕ್,
ಬೆಂಗಳೂರು – 560 050

| | |
|---|---|
| Name of the Book | **HARAPANAHALLI BHIMAVVA** |
| Author | **JAYASIMHA** |
| Publisher | **PARIMALA PRAKASHANA**<br>No 178 19th Main, Srinagar,<br>Banashankari I Stage, II Block<br>BANGALORE - 560 050 |
| Year of Publication | **1992** |
| PRICE | **Rs 15-00** |

Printers **Shri P R M Desai,**
VYASA ENTERPRISES
Lalbagh Fort Road
BANGALORE-4

# ಪರಮಪೂಜ್ಯ ಶ್ರೀ ಸೋದೆ ವಾದಿರಾಜ ಮಠಾಧೀಶರ
# ಅನುಗ್ರಹ ಸಂದೇಶ

**SRI SODF VADIRAJA MUTT UDUPI D K**
**19 9 1992**

ಶ್ರೀ ಹರಿಗುರುಗಳಲ್ಲಿ ಸ್ವಭಾವದಿಂದಲೇ ಭಕ್ತಿ ವಿಶ್ವಾಸವುಳ್ಳ ಶ್ರೀ ಜಯಸಿಂಹ ಅವರು ಕಾಲವನ್ನು ಸ್ವಲ್ಪವೂ ವ್ಯರ್ಥಮಾಡದೆ ಹರಿದಾಸ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ ಆಗಿಹೋದ ದಾಸರಾಯರುಗಳ ಜೀವನ ಚರಿತ್ರೆ ಕೃತಿಗಳು, ಮತ್ತು ಕೃತಿಗಳ ವಿಮರ್ಶೆ ಇವುಗಳಲ್ಲಿ ನಿರತರಾಗಿ ಅವರು ಅಂಥ ಗ್ರಂಥಗಳ ಸಂಕಲನವನ್ನು ತಮ್ಮ ಧ್ಯೇಯಗಳಲ್ಲಿ ಒಂದಾಗಿ ಆರಿಸಿಕೊಂಡಿರುವುದು ಬಹಳ ಸಂತೋಷಕರವಾದ ವಿಷಯ ಈ ಕೆಲಸ ಯಾರೂ ಮಾಡದಿದ್ದಲ್ಲಿ ಆಗಿಹೋದ ದಾಸರಾಯರುಗಳ ಚರಿತ್ರೆ ಮತ್ತು ಅವರು ಸಾಧಿಸಿದ ಮಹತ್ಕಾರ್ಯ ಇವೆಲ್ಲಾ ಕಾಲಚಕ್ರದಲ್ಲಿ ಮಸಳಿಸಿಹೋಗುತ್ತಿತ್ತು

ಪ್ರಕೃತ, ಹಿಂದಿನ ಶತಮಾನದ ಶ್ರೇಷ್ಠ ಹರಿದಾಸ ಪರಂಪರೆಯಲ್ಲಿ ಬಂದ ಹರಪನಹಳ್ಳಿ ಭೀಮವ್ವನವರ ಜೀವನ ಪರಿಚಯ ಮಾಡಿಕೊಡುವ ಈ ಕೃತಿಯನ್ನು ಬರೆದು ಜಯಸಿಂಹ ಅವರು ದಾಸ ಸಾಹಿತ್ಯಾಭಿಮಾನಿಗಳಿಗೆ ದೊಡ್ಡ ಕೊಡುಗೆ ನೀಡಿದ್ದಾರೆ ಹರಪನಹಳ್ಳಿ ಭೀಮವ್ವನವರು ಸ್ವಭಾವದಿಂದಲೇ ದೊಡ್ಡ ಜ್ಞಾನಿ ಮತ್ತು ಕವಯಿತ್ರಿ ಆಗಿದ್ದರು ಭೀಮವ್ವನವರ ಕೊಡುಗೆ ಹರಿದಾಸ ಸಾಹಿತ್ಯಕ್ಕೂ ಮತ್ತು ಕನ್ನಡ ಸಾಹಿತ್ಯಕ್ಕೂ ಅಮೋಘವಾದದ್ದು

ಇಂತಹ ಕೃತಿಗಳು ಶ್ರೀ ಜಯಸಿಂಹ ಅವರಿಂದ ಮುಂದೆಯೂ ಸಹ ಮೇಲಿಂದ ಮೇಲೆ ಹೊರಬರುತ್ತಿರಲಿ ಅವರ ಸೇವೆ ಹರಿದಾಸ ಸಾಹಿತ್ಯಕ್ಕೆ ಅನುಪಮವಾದ ಸೇವೆಯಾಗಲಿ ಎಂದು ನಾವು ಹಾರೈಸುತ್ತೇವೆ

ಇತಿ ನಾರಾಯಣ ಸ್ಮರಣೆಗಳು

**ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು**

# ಪರಿವಿಡಿ

ಪುಟ

# ಬಿನ್ನಹ

ಹರಪನಹಳ್ಳಿ ಭೀಮವ್ವನ ಹಾಡುಗಳು ನನಗೆ ತುಂಬಾ ಪ್ರಿಯವಾದಂಥವು ಆಕೆಯ ಸಾಹಿತ್ಯದಲ್ಲಿ ಕಂಡುಬರುವ ಸರಳತೆಯನ್ನು ನಾನು ಇಷ್ಟಪಟ್ಟಿದ್ದೇನೆ ಅದರಲ್ಲೂ ಭೀಮವ್ವನ "ಸ್ತುತಿಮಣಿ ಮಾಲಿಕೆ ನನ್ನ ಮೇಲೆ ಮೋಡಿಯನ್ನೇ ಮಾಡಿಬಿಟ್ಟಿದೆ ಅದನ್ನು ಹೇಳಿಕೊಂಡಾಗ ದೊರಕುವ ಅಲೌಕಿಕ ಆನಂದ ವರ್ಣನೆಗೆ ಮೀರಿದ್ದು

ಭೀಮವ್ವನ ಕೃತಿಗಳಂತೆ ಆಕೆಯ ಜೀವನವೂ ಸಹ ಚೇತೋಹಾರಿಯಾದದ್ದು ಓದು-ಬರಹ ಬಾರದ, ಚಿಕ್ಕ ವಯಸ್ಸಿನಲ್ಲಿಯೇ ವೈದವ್ಯಕ್ಕೆ ತುತ್ತಾದ, ಸಾಮಾನ್ಯ ಹಳ್ಳಿಯ ಹೆಂಗಸೊಬ್ಬಳು ತಿಳಿಯಾದ ಕನ್ನಡ ಭಾಷೆಯಲ್ಲಿ ವಿದ್ವದ್ಜನರೂ ತಲೆದೂಗುವಂತಹ ತತ್ವಭರಿತ ವಿಪುಲ ಸಾಹಿತ್ಯ ಸೃಷ್ಟಿಗೆ ಕಾರಣವಾಗಿರುವುದು ಎಂಥವರಲ್ಲೂ ಆಶ್ಚರ್ಯ ಹುಟ್ಟಿಸುತ್ತದೆ ಪರಮಾತ್ಮನ ಅನುಗ್ರಹ, ಅಚಲ ಆತ್ಮಸ್ಥೈರ್ಯವನ್ನು ನೀಡಿ ಎಂತಹ ಅದ್ಭುತ ಸಾಧನೆಯನ್ನು ಮಾಡಿಸಬಲ್ಲದು ಎಂಬುದಕ್ಕೆ ಭೀಮವ್ವನ ಬದುಕೇ ಒಂದು ಸ್ಪಷ್ಟ ನಿದರ್ಶನ

ಭೀಮವ್ವನ ಬದುಕನ್ನು ಸಂಕ್ಷಿಪ್ತವಾಗಿ ಬಿಂಬಿಸುವ ಈ ಚಿಕ್ಕ ಪುಸ್ತಕದ ರಚನೆಗೆ ನನ್ನನ್ನು ಪ್ರೇರೇಪಿಸಿದ್ದು ಆಕೆಯನ್ನು ಉದ್ಧರಿಸಿದ ದೈವ 'ಭೀಮೇಶ ಕೃಷ್ಣ"ನ ಕಾರುಣ್ಯವೆಂದು ನಾನು ನಂಬಿದ್ದೇನೆ

ಪರಮಪೂಜ್ಯ ಶ್ರೀ ಸೋದೆ ವಾದಿರಾಜ ಮಠಾಧೀಶರಾದ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು ತಮ್ಮ "ಅನುಗ್ರಹ ಸಂದೇಶ ವನ್ನು ನೀಡಿ ಈ ಕಿರುಕೃತಿಗೆ ಶೋಭೆ ತಂದಿದ್ದಾರೆ ಪೂಜ್ಯ ಶ್ರೀಗಳವರಿಗೆ ನನ್ನ ಭಕ್ತಿಪೂರ್ವಕ ನಮಸ್ಕಾರಗಳು

"ಪರಿಮಳ ಪ್ರಕಾಶನ"ದವರು ಪ್ರಕಟಿಸುತ್ತಿರುವ ಈ ಪುಸ್ತಕ ಅರಳಲು ಸಹಕರಿಸಿದ ಗುರುಭಕ್ತರಾದ ಶ್ರೀ ಶ್ರೀಪಾದಾಚಾರ್, ಶ್ರೀ ನರಸೇಗೌಡ, ಶ್ರೀ ಎಸ್ ಆರ್ ಆನಂದರಾವ್, ಶ್ರೀ ನಾಗರಾಜಾರಾವ್ ಮುಂತಾದವರಿಗೆ ಮತ್ತು "ಪರಿಮಳ ಗೆಳೆಯರ ಬಳಗ"ದ ಎಲ್ಲಾ ಮಿತ್ರರಿಗೆ ನಾನು ಋಣಿ ಉತ್ತಮ ವಾಗಿ ಮುದ್ರಣ ಮಾಡಿರುವ ಮಿತ್ರರಾದ ಶ್ರೀ ಪಿ ಆರ್ ಎಂ ದೇಸಾಯಿ ಮತ್ತು ಭೀಮವ್ವನ ಸುಂದರ ವರ್ಣಚಿತ್ರವನ್ನು ಬರೆದು ಮುಖಪುಟದ ವಿನ್ಯಾಸ ಮಾಡಿರುವ ಹಿರಿಯ ಕಲಾವಿದ ಶ್ರೀ ಫಕೀರಸ್ವಾಮಿ ಅವರಿಗೆ ನಾನು ಆಭಾರಿ

"ಶ್ರೀಶ ನೀ ಸಲಹೋ ಭೀಮೇಶಕೃಷ್ಣನೆ ಎನ್ನ
ಘಾಸಿ ಮಾಡದೆ ಹೃಷಿಕೇಶ ಕರುಣದಿಂದ ||"

ಬೆಂಗಳೂರು
5-10-1992

ಜಯಸಿಂಹ

# ನೋಡಿರಿ ರಾಘವೇಂದ್ರರ

ನೋಡಿರಿ ರಾಘವೇಂದ್ರರ ಮಾಡಿರಿ ನಮಸ್ಕಾರ
ಬೇಡಿದ ಇಷ್ಟವರ ನೀಡುವರು ನಮ್ಮ ಯತಿವರ ॥ ಪ ॥

ಮಂತ್ರಾಲಯದಿ ನಿಂತಿಹ ಚಿಂತೆಗಳ ಪರಿಹರಿಸುವ
ಕಂತುಪಿತನನಂತಗುಣ ತನ್ನಂತರಂಗದಿ ಸ್ತುತಿಸುವ ।
ಇಂಥ ಯತಿಗಳ ಕಾಣೆ ಹರಿಯೇಕಾಂತ ಭಕ್ತರೆನಿಸಿಕೊಂಡು
ಮಂತ್ರಾಕ್ಷತೆ ಫಲ ನೀಡಿ ತಾ ಸಂತಾನ ಸಂಪತ್ತು ಕೊಡುವರ ॥೧॥

ಭೂತ ಪ್ರೇತ ಭಯಗಳ ವಾತಪಿತ್ತ ವ್ಯಾಧಿಗಳ
ಶ್ವೇತ ಕುಷ್ಠ ರೋಗಗಳ ಪಾತಕಿಯರ ಪಾಪಗಳ ।
ಪ್ರೀತಿಯಿಂದ ಕಳೆವರ ಪ್ರಖ್ಯಾತರಾಗಿ ಬೆಳೆವರ
ಭೂತಳದಿ ಸನ್ನಿಹಿತರಾಗಿ ಸೀತಾಪತಿ ನಿಜ ದಾಸರೆನಿಪರ ॥೨॥

ಭಜಿಸೆ ಭಕ್ತರ ನೋಡುವ ಸದನಕೆ ಬಂದು ಕೂಡುವ
ಒದಗಿದಾಪತ್ತು ದೂಡುವ ಮುದದಿ ತಾ ದಯಮಾಡುವ ।
ಅಜನಯ್ಯನ ಕೊಂಡಾಡುತ ತುಂಗಾನದಿಯ ತೀರ ವಾಸವಾಗಿ
ಹೃದಯದೊಳು ಭೀಮೇಶಕೃಷ್ಣನ ಪದವ ಭಜಿಸಿ
ಪಡೆವರಾನಂದವ ॥೩॥

## ——————————ಹರಪನಹಳ್ಳಿ ಭೀಮವ್ವ

ವಿದ್ಯಾವಂತರಾದ ಪ್ರತಿಭಾನ್ವಿತರು ಅನೇಕ ಕೃತಿಗಳನ್ನು ರಚಿಸಿ ಜನಪ್ರಿಯರಾಗುವುದು ಅಷ್ಟೊಂದು ಆಶ್ಚರ್ಯಕರ ಸಂಗತಿಯಲ್ಲ ಆದರೆ ಓದು ಬರಹ ಬಾರದ, ಗ್ರಾಮೀಣ ನೆಲೆಯಿಂದ ಬಂದ ನಿರಕ್ಷರ ಕುಕ್ಷಿಯೊಬ್ಬಳು ತಿಳಿಯಾದ ಸರಸ ಶೈಲಿಯಲ್ಲಿ, ಮಧುರವಾಗಿ ಜನ–ಮನವನ್ನು ಮುಟ್ಟುವ ಕೃತಿಗಳನ್ನು ರಚಿಸುವುದು ಆಶ್ಚರ್ಯಕರವಾದದ್ದು "ಭೀಮೇಶ ಕೃಷ್ಣ"ನಾದ ಶ್ರೀಹರಿಯ ಅನುಗ್ರಹ ವಿಶೇಷದಿಂದ ಇಂತಹ ಆಶ್ಚರ್ಯಕರ ಕಾರ್ಯವನ್ನು ಮಾಡಿ ಕನ್ನಡ ಸಾಹಿತ್ಯ ಭಂಡಾರವನ್ನು ಶ್ರೀಮಂತಗೊಳಿಸಿದವಳು ಹರಪನಹಳ್ಳಿ ಭೀಮವ್ವ

ಈ ಕಡೆ ಭೀಮವ್ವನ ಹೆಸರು ಅಷ್ಟಾಗಿ ಕೇಳಿಬರುವುದಿಲ್ಲ ಆದರೆ ಉತ್ತರ ಕರ್ನಾಟಕದಲ್ಲಿ, ಅದರಲ್ಲೂ ಬಳ್ಳಾರಿ, ರಾಯದುರ್ಗ, ಧಾರವಾಡ ಮುಂತಾದ ಕಡೆ ಅವಳು ಮನೆ–ಮನೆಯ ಮಾತಾಗಿದ್ದಾಳೆ ಭೀಮವ್ವ ರಚಿಸಿರುವ ಭಕ್ತಿರಸ ಪೂರ್ಣವಾದ ಹಲವಾರು ಹಾಡುಗಳು ಇಂದಿಗೂ ಆ ಕಡೆಯ ಹೆಂಗಳೆಯರ ನಾಲಿಗೆಗಳ ಮೇಲೆ ಉದಯರಾಗವಾಗಿ ನಲಿಯುತ್ತಿವೆ ಭೀಮವ್ವನ "ಆರತಿ

ಹಾಡು ರಾಶಿಹಾಡು, ಸ್ತುತಿಮಣಿ ಮಾಲಿಕೆ ನಳಚರಿತ್ರೆ ಮುಯ್ಯದ ಹಾಡು, ರತಿ ಕಲ್ಯಾಣ ಸುಭದ್ರಾ ಕಲ್ಯಾಣ, ಪ-ದಾನದ ಹಾಡು ಮುಂತಾದ ರಚನೆ ಗಳಲ್ಲಿ ಮಿಂಚುವ ಕಾವ್ಯಶಕ್ತಿ ಅಪೂರ್ವವಾದದ್ದು ಎಂತಹ ವಿದ್ವಾಂಸರೂ ಕಣ್ಣಿಗೊತ್ತಿಕೊಳ್ಳುವಂತಹ ಅರ್ಥಪೂರ್ಣವಾದ, ವಿಪುಲವಾದ ಸಾಹಿತ್ಯ ಸೃಷ್ಟಿ ಯನ್ನು ಭೀಮವ್ವ ಮಾಡಿದ್ದಾಳೆ ಶಾಸ್ತ್ರ-ಪುರಾಣಗಳ ಮಥಿತಾರ್ಥವನ್ನು ಹರಿದಾಸರ ಸಿದ್ಧಾಂತ ಪದ್ಧತಿಗೆ ಅನುಗುಣವಾಗಿ ಸರಳವಾದ ತಿಳಿಗನ್ನಡದಲ್ಲಿ ಸುಂದರವಾಗಿ ಕಡಿದಿಟ್ಟಿದ್ದಾಳೆ ಕೇಳಿದಾಕ್ಷಣ ಮತ್ತೊಮ್ಮೆ ಕೇಳಬೇಕೆನಿಸುವ ಆಕರ್ಷಕ ಶಕ್ತಿ ಎಂತಹ ನಾಸ್ತಿಕ ಹೃದಯವನ್ನೂ ದ್ರವಿಸುವಂತಹ ಶ್ರದ್ಧಾ ಭಕ್ತಿ, ನಂಬಿಕೆಗಳು ಅವಳ ಕಾವ್ಯದಲ್ಲಿ ಕಂಗೊಳಿಸುತ್ತವೆ

ಸಾಮಾನ್ಯ ಹಳ್ಳಿಯ ಹೆಂಗಸಾದ ಭೀಮವ್ವನ ಬದುಕು ಹೂವಿನ ಹಾಸಿಗೆ ಯಾಗಿರಲಿಲ್ಲ ಶಿಕ್ಷಣ ವಂಚಿತಳಾದ ಆಕೆಗೆ ಚಿಕ್ಕವಯಸ್ಸಿನಲ್ಲಿಯೇ ವೈಧವ್ಯ ಪ್ರಾಪ್ತವಾಯಿತು ಜೀವನದ ಯೌವನಾವಸ್ಥೆಯಲ್ಲಿಯೇ ಒದಗಿದ ಈ ಆಘಾತ ದಿಂದ ಭೀಮವ್ವ ವಿಚಲಿತಳಾಗಲಿಲ್ಲ ನಿರಾಶೆಯ ಕೂಪದಲ್ಲಿ ಬಿದ್ದು ಪಲಾಯನ ವಾದಿಯಾಗಲಿಲ್ಲ ಬದುಕನ್ನು ಆಕೆ ಒಂದು ಸವಾಲಾಗಿ ಸ್ವೀಕರಿಸಿದಳು ವಿಧಿಯ ಕ್ರೌರ್ಯವನ್ನು ಶಾಪವಾಗಿ ಪರಿಗಣಿಸದೆ ಭಗವದನುಗ್ರಹವನ್ನು ಸಂಪಾದಿಸುವ ವರವಾಗಿ ಮಾರ್ಪಡಿಸಿಕೊಂಡಳು ಮನವೆ ಈ ಜನುಮ ತಪ್ಪಿದ ಮೇಲೆ ಯಾವ ಸಾಧನೆಂಬೂ ನಿಶ್ಚಯವಿಲ್ಲ, ವಿಜಯವಿಠಲ ಬಲ್ಲ ಎಂಬ ವಿಜಯದಾಸರ ವಾಣಿಯನ್ನು ತನ್ನ ಬದುಕಿನ ಧ್ಯೇಯವಾಕ್ಯವಾಗಿ ಸ್ವೀಕರಿಸಿ ಇಡೀ ಸ್ತ್ರೀಕುಲ ಹೆಮ್ಮೆ ಪಡುವಂತಹ ಸಾಧನೆಯನ್ನು ಭೀಮವ್ವ ಮಾಡಿದಳು ಕೃಷ್ಣಾರ್ಪಣ ಬುದ್ಧಿಯಿಂದ ತನ್ನನ್ನು ಭೀಮೇಶ ಕೃಷ್ಣನ ಚರಣಕಮಲಗಳಿಗೆ ಸಮರ್ಪಿಸಿಕೊಂಡು ಮೀಸಲು ಬಾಳು ನಡೆಸಿ ತನ್ನ ಬದುಕನ್ನು ಸಾರ್ಥಕಪಡಿಸಿಕೊಂಡಿದ್ದಷ್ಟೇ ಅಲ್ಲದೆ ಇತರರ ಬದುಕಿಗೂ ಒಂದು ಮಾದರಿಯಾದಳು ಯಾವ ಸದ್ದು-ಗದ್ದಲವಿಲ್ಲದೆ ಹಣತೆಯ ದೀಪದಂತೆ ಶಾಂತವಾಗಿ ಭಕ್ತಿಯ ಬೆಳಕನ್ನು ಸುತ್ತ ಮುತ್ತ ಪಸರಿಸಿ ಕನ್ನಡಿಗರು ಎಂದೆಂದಿಗೂ ಮರೆಯದಂತಹ ಉತ್ತಮ ಸಾಹಿತ್ಯ ಕೃತಿಗಳನ್ನು ನೀಡಿ, ಹರಿದಾಸ ಸಾಹಿತ್ಯದ ನಭೋ ಮಂಡಲದಲ್ಲಿ ಉಜ್ವಲ ತಾರೆಯಾಗಿ ಬೀಮವ್ವ ಸೇರ್ಪಡೆಯಾದಳು

**ಜನನ–ಬಾಲ್ಯ**

ಹೆಸರೇ ಹೇಳುವಂತೆ ಭೀಮವ್ವ ಹರಪನಹಳ್ಳಿಯವಳು ಅವಳ ತವರು ಮನೆ ಮತ್ತು ಅತ್ತೆಯ ಮನೆ ಎರಡೂ ಹರಪನಹಳ್ಳಿಯಲ್ಲಿಯೇ ಇದ್ದದ್ದು ಆದರೆ ಅವಳ ತಾಯಿಯ ತವರು ಮನೆ ಮಾತ್ರ ಹೊಸಪೇಟೆ ತಾಲ್ಲೂಕಿಗೆ ಸೇರಿದ ನಾರಾಯಣ ದೇವರಕೆರೆಯಲ್ಲಿತ್ತು ನಾರಾಯಣ ದೇವರಕೆರೆ ಎಂಬುದು ಹೊಸ ಪೇಟೆ ಬಳಿಯ ತುಂಗಭದ್ರಾ ಅಣೆಕಟ್ಟಿನ ಜಲಾನಯನ ಪ್ರದೇಶದಲ್ಲಿ ಹಿಂದೆ ಇದ್ದ ಒಂದು ಪುಟ್ಟ ಹಳ್ಳಿ ಭೀಮವ್ವ ಹುಟ್ಟಿದ್ದು ಅಲ್ಲಿಯೇ ಅವಳು ಹುಟ್ಟಿದ್ದು ಕ್ರಿ ಶ 1823ನೇ ಇಸವಿಯಲ್ಲಿ ತಾಯಿಯ ಹೆಸರು ರಾಘಮ್ಮ ತಂದೆಯದು ರಘುಪತ್ಯಾಚಾರ್ಯ ಕೌಂಡಿನ್ಯ ಗೋತ್ರದ ಯಜುರ್ವೇದಿಗಳಾದ ಅವರು ಮಂತ್ರಾಲಯದ ಶ್ರೀ ರಾಘವೇಂದ್ರ ಸ್ವಾಮಿಗಳ ಮಠದ ಅನುಯಾಯಿಗಳು

ತಂದೆ–ತಾಯಿಗಳ ಚೊಚ್ಚಲ ಮಗಳಾಗಿ ಭೀಮವ್ವ ಸ್ವಭಾನು ಸಂವತ್ಸರದ ಜೇಷ್ಠ ಬಹುಳ ತ್ರಯೋದಶಿಯಂದು ಜನ್ಮ ತಾಳಿದಳು ಆಕೆಗೆ ಕಮಲಾಕ್ಷಿ" ಎಂಬ ಜನ್ಮನಾಮವಿತ್ತಾದರೂ ಭೀಮಾಬಾಯಿ ಅಥವಾ ಭೀಮವ್ವ ಎಂಬ ಹೆಸರೇ ಹೆಚ್ಚು ರೂಢಿಯಲ್ಲಿ ಬಂದಿತು ಭೀಮವ್ವನ ನಂತರ ರಾಘಮ್ಮ–ರಘುಪತ್ಯಾಚಾರ್ಯ ದಂಪತಿಗಳಿಗೆ ಒಬ್ಬ ಗಂಡು ಮಗ ಮತ್ತು ಇಬ್ಬರು ಹೆಣ್ಣುಮಕ್ಕಳು ಹುಟ್ಟಿದರು ಅವರಿಗೆ ಕ್ರಮವಾಗಿ ದ್ವೈಪಾಯನಾಚಾರ್ಯ ಬಾಳವ್ವ ಮತ್ತು ರಮಾಬಾಯಿ ಎಂಬ ಹೆಸರುಗಳನ್ನು ಇಟ್ಟರು

ಭೀಮವ್ವನ ತಂದೆ–ತಾಯಿಗಳು ವೈಷ್ಣವ ಸಂಪ್ರದಾಯದವರು ಹಬ್ಬ–ಹರಿದಿನಗಳನ್ನು ತುಂಬಾ ನಿಷ್ಠೆಯಿಂದ ಅವರು ಆಚರಿಸುತ್ತಿದ್ದರು ದೈವಭಕ್ತಿ ಮತ್ತು ಒಳ್ಳೆಯ ಗುಣಶೀಲಗಳಿಂದ ಸರಳವಾದ ಜೀವನವನ್ನು ನಡೆಸುತ್ತಿದ್ದರು ಭೀಮವ್ವನ ತಾತನ ಹೆಸರು ಜೋಯಿಸ ವೆಂಕಪ್ಪಾಚಾರ್ಯ ಅವರು ದಾಸದೀಕ್ಷೆಯನ್ನು ಸ್ವೀಕರಿಸಿ ಹರಿದಾಸರಾಗಿದ್ದರು ಇಂಪಾಗಿ ದೇವರನಾಮಗಳನ್ನು ಹೇಳುತ್ತಿದ್ದರು ಭೀಮವ್ವ ಮಗುವಾಗಿದ್ದಾಗ ಅವಳ ತಾತನೇ ದೇವರನಾಮಗಳನ್ನು ಹೇಳಿಕೊಂಡು ತೊಟ್ಟಿಲನ್ನು ತೂಗುತ್ತಿದ್ದರು ದೇವರನಾಮಗಳನ್ನು ಹೇಳಿಕೊಂಡು ತೊಟ್ಟಿಲನ್ನು ತೂಗಿದಾಗ ಭೀಮವ್ವ ಶಾಂತವಾಗಿ ಮಲಗಿ ನಿದ್ರಿಸುತ್ತಿದ್ದಳಂತೆ ಲೌಕಿಕ ಪದಗಳನ್ನು ಹೇಳಿಕೊಂಡು ಬೇರೆ ಯಾರಾದರೂ ತೂಗಿದರೆ ನಿದ್ರೆಮಾಡದೆ ಅವಳು ಅಳುತ್ತಿದ್ದಳಂತೆ

ಬೆಳೆಯುವ ಪೈರು ಮೊಳಕೆಯಲ್ಲೇ ಎಂಬಂತೆ ಭೀಮವ್ವನ ಆಸ್ಥೆ - ಆಸಕ್ತಿಗಳು ಚಿಕ್ಕಂದಿನಿಂದಲೇ ಒಡಮೂಡುತ್ತಿದ್ದವು

ಮತ್ತೊಂದು ವಿಶೇಷವೆಂದರೆ ಮಗುವಾಗಿದ್ದಾಗಲೇ ಭೀಮವ್ವನ ಮೈಮೇಲೆ ಚಕ್ರಗಳ ಚಿನ್ನೆಗಳು ಒಡಮೂಡಿದ್ದವಂತೆ ಅವಳ ಅಂಗೈ ಮತ್ತು ಅಂಗಾಲುಗಳಲ್ಲಿ ದೇವತಾಸ್ತ್ರೀಯರಿಗಿರುವಂತೆ ಪದ್ಮರೇಖೆಗಳು ಸ್ಪಷ್ಟವಾಗಿ ಗೋಚರಿಸುತ್ತಿದ್ದವಂತೆ

ಭೀಮವ್ವನ ತಾತನಾದ ಜೋಯಿಸ ವೆಂಕಪ್ಪಾಚಾರ್ಯರಿಗೆ ಜೋತಿಷ್ಯ ತಿಳಿದಿತ್ತು ಅವರು ಭೀಮವ್ವನ ಜಾತಕವನ್ನು ಪರೀಕ್ಷೆಮಾಡಿ ಅವಳು ಮುಂದೆ ಭಗವದ್ಭಕ್ತಳಾಗಿ ಮನೆತನಕ್ಕೆ ಒಳ್ಳೆಯ ಹೆಸರು ತರುವಳೆಂದು ಅಭಿಪ್ರಾಯ ಪಟ್ಟಿದ್ದರು

ಭೀಮವ್ವ ಒಂದು ವರ್ಷದ ಮಗುವಾಗಿದ್ದಾಗ ಒಮ್ಮೆ ಹೀಗೆ ನಡೆಯಿತು ಒಂದು ದಿನ ಮಧ್ಯಾಹ್ನ, ತಾಯಿ ರಾಘವಮ್ಮ ಕಾಳುಬೀಸಬೇಕೆಂದು ಪಕ್ಕದ ಮನೆಗೆ ಹೋಗಿದ್ದಳು ಮಗು ತೊಟ್ಟಿಲಲ್ಲಿ ಮಲಗಿ ನಿದ್ರಿಸುತ್ತಿತ್ತು ಮನೆಯಲ್ಲಿ ಯಾರೂ ಇರಲಿಲ್ಲ ಸ್ವಲ್ಪ ಸಮಯದ ನಂತರ ಎಲ್ಲೋ ಹೋಗಿದ್ದ ತಂದೆ ಮನೆಗೆ ಬಂದರು ಅಲ್ಲಿ ಅವರು ಕಂಡ ದೃಶ್ಯ ಏನು ? ಮಗು ಹಾಯಾಗಿ ಮಲಗಿ ನಿದ್ರಿಸುತ್ತಿದೆ ಆದರೆ ಮಗುವಿನ ಪಕ್ಕದಲ್ಲಿ ತೊಟ್ಟಿಲಿನ ಹಗ್ಗದ ಮೂಲಕ ಇಳಿದು ಬಂದಿದ್ದ ಹಾವೊಂದು ಹೆಡೆಯಾಡಿಸುತ್ತಿದೆ ತಂದೆಗೆ ಆ ಕೃಷ್ಣಸರ್ಪವನ್ನು ನೋಡಿ ಎದೆ ಭುಗಿಲೆದ್ದಿತು ! ಅವರು ಗಾಭರಿಯಿಂದ ಆಚೀಚೆ ಜನರನ್ನು ಕೂಗುವಷ್ಟರಲ್ಲಿ ಆ ಹಾವು ಹೊರಟುಹೋಗಿತ್ತು ಆ ನಂತರ ಪಕ್ಕದ ಮನೆಗೆ ಹೋಗಿದ್ದ ತಾಯಿಯೂ ಬಂದಳು ಮಗುವಿಗೆ ಯಾವ ತೊಂದರೆಯೂ ಆಗದಿರುವುದನ್ನು ಕಂಡು ಅವಳಿಗಾದ ಆನಂದ ಅಷ್ಟಿಷ್ಟಲ್ಲ ದಂಪತಿಗಳು ಆನಂದಭಾಷ್ಪ ಸುರಿಸುತ್ತಾ ದೇವರ ಮುಂದೆ ತುಪ್ಪದ ದೀಪವನ್ನು ಹಚ್ಚಿಟ್ಟರು

## ಅಪೂರ್ವ ಸ್ಮರಣಶಕ್ತಿ

ಬಿದಿಗೆಯ ಚಂದ್ರನಂತೆ ಭೀಮವ್ವ ಬೆಳೆಯಲಾರಂಭಿಸಿದಳು ಅವಳ ಬಾಲಲೀಲೆಗಳು ಮೋಹಕವಾಗಿದ್ದವು ಪುಟ್ಟ–ಪುಟ್ಟ ಹೆಜ್ಜೆಗಳನ್ನು ಇಡುತ್ತಾ ಅವಳು ತನ್ನ ಕಾಲಿಗೆ ಕಟ್ಟಿದ ಗೆಜ್ಜೆಯ ಸದ್ದಿನೊಂದಿಗೆ ಮನೆ ತುಂಬಾ ಓಡಾಡುತ್ತಿದ್ದುದೇ ಒಂದು ಸೊಗಸು ! ನೋಡಿದವರೆಲ್ಲಾ ಇವಳು ನಮ್ಮ ಊರಿಗೆ

ಗೌರವ ತರುತ್ತಾಳೆ ಎಂದು ಎತ್ತಿಕೊಂಡು ಮುದ್ದಾಡುತ್ತಿದ್ದರು ಇದನ್ನು ಕಂಡಾಗ ಅವಳ ತಂದೆ-ತಾಯಿಗಳಿಗಾಗುತ್ತಿದ್ದ ಆನಂದ ಹೇಳತೀರದು ಮಗಳ ಮೈಮೇಲೆ ಸ್ಪಷ್ಟವಾಗಿ ಕಾಣುತ್ತಿದ್ದ ದೇವತಾ ಚಿನ್ಹೆಗಳು, ಒಂದು ಮಧ್ಯಾಹ್ನ ತೊಟ್ಟಿಲಿನಿಂದ ಇಳಿದುಬಂದು ದ್ರಿಸುತ್ತಿದ್ದ ಅವಳ ತಲೆಯ ಸಮೀಪ ಹೆಡೆ ಯಾಡಿಸುತ್ತಿದ್ದ ಕೃಷ್ಣಸರ್ಪದ ದೃಶ್ಯ-ಇವೆಲ್ಲವೂ ಅವರಿಗೆ ಭೀಮವ್ವನ ಭವ್ಯ ಭವಿಷ್ಯದ ಬಗ್ಗೆ ಸದೃಢ ಭರವಸೆಯನ್ನು ನೀಡಿದ್ದವು

ಆಗಿನ ಕಾಲದಲ್ಲಿ ಹಳ್ಳಿಗಳಲ್ಲಿ ವಿದ್ಯಾಭ್ಯಾಸದ ವ್ಯವಸ್ಥೆ ಅಷ್ಟೊಂದು ಸಮರ್ಪಕವಾಗಿರಲಿಲ್ಲ ಅದರಲ್ಲೂ ಸಾಮಾನ್ಯವಾಗಿ ಹೆಣ್ಣುಮಕ್ಕಳನ್ನು ಶಾಲೆಗಳಿಗೆ ಕಳಿಸುವ ಪದ್ಧತಿ ಬೆಳೆದಿರದಿಲ್ಲ ಹಾಗಾಗಿ ಭೀಮವ್ವನಿಗೂ ಅವಳ ತಂದೆ ತಾಯಿಗಳು ಓದು-ಬರಹ ಕಲಿಸಲಿಲ್ಲ ಆದರೆ ದೇವರ ಅನುಗ್ರಹದಿಂದಲೋ ಏನೋ ಭೀಮವ್ವನ ಸ್ಮರಣಶಕ್ತಿ ಅದ್ಭುತವಾಗಿತ್ತು ಒಂದು ಸಲ ಗ್ರಹಿಸಿದ ವಿಚಾರಗಳನ್ನು ಅವಳು ಚೆನ್ನಾಗಿ ನೆನಪಿನಲ್ಲಿಟ್ಟುಕೊಳ್ಳುತ್ತಿದ್ದಳು ಬಾಲ್ಯದಲ್ಲಿ ನಡೆದ ಎಷ್ಟೋ ಸಂಗತಿಗಳನ್ನು ಅವಳು ತನ್ನ ಎಪ್ಪತ್ತರ ಮುಪ್ಪಿನಲ್ಲೂ ಕಣ್ಣಿಗೆ ಕಟ್ಟುವಂತೆ ವಿವರವಾಗಿ ವರ್ಣಿಸುತ್ತಿದ್ದಳಂತೆ ಎಷ್ಟೋ ವರುಷಗಳ ಹಿಂದೆ ತಾನು ರಚಿಸಿದ ಹಾಡುಗಳನ್ನು ಸಹ ಒಂದು ಪದವೂ ವ್ಯತ್ಯಾಸವಾಗದ ಹಾಗೆ ಸ್ಪಷ್ಟವಾಗಿ ಹೇಳುತ್ತಿದ್ದಳಂತೆ

ಭೀಮವ್ವ ಎರಡು ವರ್ಷದ ಬಾಲಿಕೆಯಾಗಿದ್ದಾಗ ಅವಳ ತಂದೆ ತಾಯಿಗಳು ಆಕೆಗೆ ಒಂದು ಚಿನ್ನದ ಮುಂದಲೆಹೂವನ್ನು ಮಾಡಿಸಿದ್ದರು ಎರಡನೆ ವರ್ಷದ ಹುಟ್ಟಿದ ಹಬ್ಬದ ದಿವಸ ಭೀಮವ್ವನಿಗೆ ಮುಂದಲೆಹೂವನ್ನು ತೊಡಿಸಿ ಅಲಂಕರಿಸಿದ್ದರು ಹಬ್ಬದ ದಿನ ರಾತ್ರಿ ಭೀಮವ್ವ ತಲೆಯಿಂದ ಮುಂದಲೆಹೂವಿನ ಆಭರಣ ತೆಗೆಯದೇ ಹಾಗೇ ನಿದ್ರೆಮಾಡಿದ್ದಳು ರಾತ್ರಿ ಒಂದು ಹೊತ್ತಿನಲ್ಲಿ ಅವಳು ಇದ್ದಕ್ಕಿದ್ದ ಹಾಗೆ ಎದ್ದು ಚೇಳು ಬಂದಿದೆ ಚೇಳು ಬಂದಿದೆ ಎಂದು ಕೂಗತೊಡಗಿದಳು ಕೂಡಲೆ ಮನೆಯವರು ದಡಬಡನೆ ಎದ್ದು ದೀಪಬೆಳಗಿಸಿ ಎಲ್ಲ ಕಡೆಯೂ ಹುಡುಕಿದರು ಆದರೆ ಚೇಳು ಎಲ್ಲೂ ಕಾಣಿಸಲಿಲ್ಲ ಆಗ ಚಿಕ್ಕ ಹುಡುಗಿಯಾದ ಭೀಮವ್ವ ಅಳುತ್ತಾ ಚೇಳು ನನ್ನ ಮುಂದಲೆಹೂವಿನ ಅಡಿಯಲ್ಲಿದೆ" ಎಂದಳು ಮನೆಯವರು ಅವಳ ಮುಂದಲೆಹೂವನ್ನು ತೆಗೆದು ಶೋಧಿಸಿ

ದಾಗ ಚೇಳು ಆಭರಣದೊಳಗೆ ಕೊಂಡಿಯಾಡಿಸುತ್ತಾ ಇತ್ತಂತೆ ! ಭೀಮವ್ವನ ಅಶೀತ ಪ್ರಜ್ಞಾಶಕ್ತಿಯನ್ನು ಬಿಂಬಿಸುವ ಇಂತಹ ಅನೇಕ ಪ್ರಸಂಗಗಳು ಅವಳ ಬಾಲ್ಯದಲ್ಲಿ ನಡೆದಿವೆ

ಭೀಮವ್ವನಿಗೆ ಸುಮಾರು ನಾಲ್ಕು ವರ್ಷಗಳು ತುಂಬಿದಾಗ ಅಂದರೆ 1826ನೇ ಇಸವಿಯಲ್ಲಿ ನಡೆದ ಘಟನೆಯೊಂದು ಉಲ್ಲೇಖಾರ್ಹವಾದದ್ದು ಆಗ ಬ್ರಿಟಿಷರು ನಮ್ಮ ದೇಶದಲ್ಲಿ ರಾಜ್ಯಭಾರ ನಡೆಸುತ್ತಿದ್ದ ಸಮಯ ಹರಪನಹಳ್ಳಿಗೆ ಒಂದು ಸಲ ಸೈನಿಕರ ದಂಡು ಬಂದಿತು ಕುದುರೆಗಳು ಸಿಪಾಯಿ ಗಾಡಿಗಳು, ಅವುಗಳ ಹಿಂದೆ ಸಾಲುಸಾಲಾಗಿ ಸಾಗುತ್ತಿರುವ ಸಾವಿರಾರು ಸೈನಿಕರು ಬಂದೂಕ ವನ್ನು ಹಿಡಿದು ಹೊರಟಿರುವವರದು ಒಂದು ಸಾಲು ಬಂದೂಕವಿಲ್ಲದವರದು ಒಂದು ಸಾಲು ಸಮವಸ್ತ್ರಧಾರಿಯರಾದ ಆ ಸೈನಿಕರ ಬೂಟುಕಾಲಿನ ಶಬ್ದ ಲಯಬದ್ಧವಾಗಿ ಕೇಳಿಬರುತ್ತಿತ್ತು

ಹರಪನಹಳ್ಳಿಯ ಜನಗಳೆಲ್ಲರೂ ವಿಸ್ಮಯ ದೃಷ್ಟಿಯಿಂದ ಈ ದೃಶ್ಯವನ್ನು ನೋಡುತ್ತಿದ್ದರು ಮಕ್ಕಳಿಗಂತೂ ಇದೊಂದು ಬಗೆಯ ಮೋಜಾಗಿತ್ತು ಉತ್ಸಾಹ ಸಡಗರಗಳಿಂದ ಒಬ್ಬರನ್ನೊಬ್ಬರು ಕರೆಯುತ್ತಾ ಅವರೆಲ್ಲರೂ ಸೈನಿಕರು ಹೋಗುತ್ತಿದ್ದ ಬೀದಿಯಲ್ಲಿ ಸೇರಿಬಿಟ್ಟಿದ್ದರು

ಮಕ್ಕಳ ಗುಂಪಿನಲ್ಲಿ ಭೀಮವ್ವನೂ ನಿಂತುಕೊಂಡಿದ್ದಳು ಎಲ್ಲರಂತೆ ಅವಳೂ ಈ ನೋಟವನ್ನು ಕುತೂಹಲದಿಂದ ತನ್ನ ಪುಟ್ಟ ಕಣ್ಣುಗಳನ್ನರಳಿಸಿ ನೋಡುತ್ತಿದ್ದಳು ಆಗಾಗ ಕೈ ಚಪ್ಪಾಳೆ ತಟ್ಟಿ ತನ್ನ ಸಂತೋಷವನ್ನು ವ್ಯಕ್ತಪಡಿಸು ತ್ತಿದ್ದಳು ತುಂಬಾ ಮುದ್ದಾಗಿ ಕಾಣುತ್ತಿದ್ದ ಅವಳ ಮೈತುಂಬಾ ಮನೆಯವರು ಬೆಲೆಬಾಳುವ ಆಭರಣಗಳನ್ನು ತೊಡಿಸಿದ್ದರು ಅವುಗಳ ಹೊಳಪಿನಿಂದ ಸಹಜ ವಾಗಿ ಜನಗಳ ದೃಷ್ಟಿ ಅವಳ ಕಡೆ ಹೊರಳುತ್ತಿತ್ತು ಸಾಲಿನಲ್ಲಿ ನಡೆಯುತ್ತಿದ್ದ ಸೈನಿಕನೊಬ್ಬನ ದೃಷ್ಟಿ ಭೀಮವ್ವನ ಮೇಲೆ ಬಿತ್ತು ಅವಳು ಧರಿಸಿದ ಬೆಲೆಬಾಳುವ ಆಭರಣಗಳು ಅವನ ಕಣ್ಣು ಕುಕ್ಕಿದವು ಅವನು ಭೀಮವ್ವನನ್ನು ನೋಡಿ ಮುಗುಳುನಕ್ಕ ಹತ್ತಿರ ಕರೆದು ಎತ್ತಿಕೊಂಡ ಮೃದುವಾಗಿ ಮಾತನಾಡಿಸುತ್ತಾ ಮುಂದೆ ಸಾಗಿದ ಏನಾದರೂ ಮಾಡಿ ಭೀಮವ್ವನ ಆಭರಣಗಳನ್ನು ಲಪಟಾಯಿ ಸುವ ಹಂಚಿಕೆ ಅವನದು

ಆದರೆ ಸ್ವಲ್ಪ ದೂರ ಹೋಗುವಷ್ಟರಲ್ಲಿಯೇ ಸೈನಿಕನ ಮನಸ್ಸು ಬದಲಾಯಿತು ಕಿಲ ಕಿಲ ನಗುತ್ತಾ, ಮುದ್ದು ಮುದ್ದಾಗಿ ತೊದಲುನುಡಿಯಾಡುತ್ತಾ ನಿರ್ಭಯವಾಗಿದ್ದ ನಾಲ್ಕು ವರ್ಷದ ಹುಡುಗಿ ಭೀಮವ್ವ ಅವನ ಹೃದಯವನ್ನು ಸೂರೆಗೊಂಡಿದ್ದಳು ಶುದ್ಧ ಮುಗ್ಧವಾದ ಅವಳ ಸರಳ ಸ್ವಭಾವದೆದುರಿನಲ್ಲಿ ಸೈನಿಕನ ದುರಾಲೋಚನೆ ಕರಗಿಹೋಗಿತ್ತು

ಆ ಸೈನಿಕನಿಗೆ ಭೀಮವ್ವನ ಬಾಲ ಮುಗ್ಧ ಭಾಷೆ ತನ್ನ ಮಗುವಿನ ನೆನಪನ್ನು ತಂದಿರಬೇಕು ಆತ ಮುದ್ದಿನ ಗಿಣಿಯಂತೆ ತೋರುತ್ತಿದ್ದ ಭೀಮವ್ವನನ್ನು ಮುದ್ದಿಸಿ, ಅವಳ ಕೈತುಂಬಾ ಸಿಹಿ ತಿಂಡಿಗಳನ್ನು ಕೊಡಿಸಿದ ಆಭರಣಗಳನ್ನು ಕಸಿಯುವ ಬದಲು ಅವಳ ಮನೆ ಎಲ್ಲಿ ಎಂದು ವಿಚಾರಿಸಿ ಭೀಮವ್ವನನ್ನು ಅವಳ ಮನೆಯುವರೆಗೂ ತಂದು ಬಿಟ್ಟುಹೋದ (ಆಭರಣಗಳನ್ನು ಕಸಿಯುವ ದುರಾಸೆಯಿಂದಾಗಿ ಸೈನಿಕನ ಕಣ್ಣುಗಳು ಕಾಣಿಸದಂತಾಯಿತೆಂದೂ ಅವರಿವರ ಸಹಾಯದಿಂದ ಅವಳನ್ನು ಮನೆಯವರೆಗೂ ಬಿಟ್ಟುಬಂದ ಸ್ವಲ್ಪ ಸಮಯದಲ್ಲಿಯೇ ಅವನ ಕಣ್ಣುಗಳು ಪುನ ಕಾಣಿಸುವಂತಾಯಿತೆಂದೂ ಹೇಳುತ್ತಾರೆ )

## ಗಂಭೀರ ಪ್ರವೃತ್ತಿ-ತನ್ಮಯತೆ

ಭೀಮವ್ವನಿಗೆ ಆರುವರ್ಷವಾಗಿದ್ದಾಗ ಒಂದು ವಿಶೇಷ ನಡೆಯಿತು ಒಮ್ಮೆ ಭೀಮವ್ವನ ತಾತ ಜೋಯಿಸ ವೆಂಕಪ್ಪಾಚಾರ್ಯರು ಒಂದು ರೀತಿಯ ವಿಲಕ್ಷಣವಾದ ಬೆಳಕನ್ನು ಕಂಡರು ಆ ಬೆಳಕು ಚಿಕ್ಕ ಬಾಲಿಕೆಯಾದ ಭೀಮವ್ವನ ಮೇಲೆ ಸರಿಯಾಗಿ ಬೀಳುತ್ತಿತ್ತು ವೆಂಕಪ್ಪಾಚಾರ್ಯರಿಗೆ ಆ ದಿವ್ಯವಾದ ಪ್ರಭೆಯಲ್ಲಿ ಜಟಾಧಾರಿಗಳಾಗಿ ಕುಳಿತುಕೊಂಡಿದ್ದ ವೇದವ್ಯಾಸದೇವರ ಪ್ರಸನ್ನಕರವಾದ ರೂಪ ಕಂಡಿತಂತೆ ಆದರೆ ಭೀಮವ್ವನಿಗೆ ಇದರ ಯಾವ ಅರಿವೂ ಆಗಲಿಲ್ಲ ವೇದವ್ಯಾಸದೇವರ ದಿವ್ಯ ಪ್ರಭೆ ಭೀಮವ್ವನ ಮೇಲೆ ಬಿದ್ದ ನಂತರ ಆಕೆ ದೈವೋನ್ಮಾದಿನಿಯ ಸ್ಥಿತಿ ತಲುಪಿದಳೆಂಬ ಹೇಳಿಕೆಯಿದೆ

ಎಂಟುವರ್ಷದ ಬಾಲಕಿಯಾಗುವ ಹೊತ್ತಿಗೆ ಭೀಮವ್ವ ಗಂಭೀರ ಸ್ವಭಾವದವಳಾದಳು ತನ್ನ ವಯಸ್ಸಿನ ಸ್ನೇಹಿತೆಯರೊಂದಿಗೆ ಸದಾ ಆಟವಾಡುವುದಾ

ಗಲಿ ಹರಟೆ ಕೊಚ್ಚುವುದಾಗಲಿ ಅವಳಿಗೆ ಸೇರುತ್ತಿರಲಿಲ್ಲ ಯಾವುದೋ ಚಿಂತನೆಯಲ್ಲಿ ಮುಳುಗಿರುವಂತೆ ಮೌನವಾಗಿರುತ್ತಿದ್ದ ಅವಳಿಗೆ ದೇವರ ಭಜನೆ, ಕೀರ್ತನೆಗಳೆಂದರೆ ಉತ್ಸಾಹ ಇಮ್ಮಡಿಗೊಳ್ಳುತ್ತಿತ್ತು ತನ್ನ ಮನೆಯ ಸುತ್ತಮುತ್ತಲಲ್ಲಿ ಎಲ್ಲಿಯಾದರೂ ಭಜನೆ, ಹರಿಕಥೆಗಳು ನಡೆದರೆ ಭೀಮವ್ವ ಅಲ್ಲಿಗೆ ತಪ್ಪದೇ ಹೋಗುತ್ತಿದ್ದಳು ಎಷ್ಟು ಹೊತ್ತಾದರೂ ಸರಿ ಬೇಸರವಿಲ್ಲದೆ ಕುಳಿತುಕೊಂಡು ಕೇಳುತ್ತಿದ್ದಳು ಮನೆಗೆ ಬಂದ ನಂತರ ಅಲ್ಲಿ ಕೇಳಿದ ದೇವರನಾಮಗಳನ್ನು, ಕಥಾ–ಸಂದರ್ಭಗಳನ್ನು ಸ್ವಲ್ಪವೂ ತಪ್ಪದೆ, ತಡವರಿಸದೆ ಹೇಳುತ್ತಿದ್ದಳು

ಮತ್ತೊಂದು ಆಶ್ಚರ್ಯಕರ ಸಂಗತಿಯೆಂದರೆ ಭೀಮವ್ವ ಪುರಾಣ, ಪುಣ್ಯ ಕಥೆಗಳನ್ನು ಕೇಳುವಾಗ ಅದರಲ್ಲೇ ತನ್ಮಯಳಾಗುತ್ತಿದ್ದಳಷ್ಟೇ ಅಲ್ಲದೆ ಅವುಗಳ ಪಾತ್ರಗಳಲ್ಲಿ ತನ್ನನ್ನು ತಾನು ಕಂಡುಕೊಳ್ಳುತ್ತಿದ್ದಳು ಕಥೆಯಲ್ಲಿ ಯಾವುದಾದರೂ ದುಃಖದ ಪ್ರಸಂಗ ಬಂದರೆ ತಾನೂ ದುಃಖಪಟ್ಟು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು ಸಂತೋಷಕರವಾದ ಸಂಗತಿಗಳು ಬಂದರೆ ತನಗೇ ಆದ ಸಂತೋಷವೆಂಬಂತೆ ಉಲ್ಲಸಿತಳಾಗುತ್ತಿದ್ದಳು ಒಂದೊಂದು ಸಲ ದಿನಗಟ್ಟಲೆ ದೈವೋನ್ಮಾದಿನಿಯಂತೆ ಮೌನವಹಿಸಿ ಇದ್ದುಬಿಡುತ್ತಿದ್ದಳು ನೋಡುವವರಿಗೆ ಅವಳ ಮನಃಸ್ಥಿತಿ ಅರ್ಥವಾಗದೆ, ಅವಳ ವರ್ತನೆ ವಿಚಿತ್ರವಾಗಿ ಕಾಣುತ್ತಿತ್ತು ಅವಳನ್ನು ಹುಚ್ಚಿ ಎಂದು ಕರೆದವರೂ ಉಂಟು

ಒಮ್ಮೆ ಭೀಮವ್ವನ ಅಕ್ಕಪಕ್ಕದ ಮನೆಯ ಹೆಂಗಸರೆಲ್ಲಾ ಕಾಳುಗಳನ್ನು ಬೀಸಲು ಒಟ್ಟಿಗೆ ಸೇರಿದ್ದರು ತನ್ನ ತಾಯಿಯ ಜೊತೆಗೆ ಭೀಮವ್ವನೂ ಅಲ್ಲಿಗೆ ಹೋಗಿದ್ದಳು ಕಾಳುಗಳನ್ನು ಬೀಸುವಾಗ ಆ ಹೆಂಗಸರು ಜನಪದ ಧಾಟಿಯಲ್ಲಿ ಪತಿದಾನ ಎಂಬ ಕಥೆಯ ಹಾಡನ್ನು ಹೇಳಿಕೊಳ್ಳುತ್ತಿದ್ದರು ಪತಿದಾನವೆಂಬುದು ಶ್ರೀಕೃಷ್ಣ, ರುಕ್ಮಿಣಿ ಮತ್ತು ಸತ್ಯಭಾಮೆಯರನ್ನು ಕುರಿತಾದ ಪೌರಾಣಿಕ ಪ್ರಸಂಗವನ್ನು ವರ್ಣಿಸುವ ಕಥನ–ಕಾವ್ಯ ಎಂಟುವರ್ಷದ ಹುಡುಗಿಯಾದ ಭೀಮವ್ವ ಅವರು ಸುಶ್ರಾವ್ಯವಾಗಿ ಹೇಳುತ್ತಿದ್ದ ಹಾಡನ್ನೇ ತದೇಕಚಿತ್ತದಿಂದ ಕೇಳುತ್ತಿದ್ದಳು ಅದರಲ್ಲಿ ಶ್ರೀಕೃಷ್ಣ ತನ್ನ ಹೆಂಡತಿಯಾದ ಸತ್ಯಭಾಮೆಯನ್ನು ಬಿಟ್ಟುಹೋಗುವ ಸಂದರ್ಭ ಬರುತ್ತದೆ ಆ ಸಂದರ್ಭದ ವರ್ಣನೆಯನ್ನು ಕೇಳು

ತ್ತಿದ್ದಾಗ ಭೀಮವ್ವನಿಗೆ ದುಃಖವನ್ನು ತಡೆಯಲಾಗಲಿಲ್ಲ ಅವಳು ಗಟ್ಟಿಯಾಗಿ ಅತ್ತುಬಿಟ್ಟಳು

ಅದನ್ನು ಕಂಡು ಆ ಹೆಂಗಸರು ಏನೇ ಭೀಮವ್ವ ಶ್ರೀಕೃಷ್ಣ ಸತ್ಯಭಾಮೆಯನ್ನು ಬಿಟ್ಟುಹೋದರೆ ನೀನೇಕೆ ಅಳುತ್ತೀ' ಎಂದು ಹಾಸ್ಯದಿಂದ ಪ್ರಶ್ನೆ ಮಾಡಿದರು

ಕೃಷ್ಣ ಸತ್ಯಭಾಮೆಯನ್ನು ಯಾಕೆ ಬಿಟ್ಟುಹೋಗಬೇಕು ? ಹಾಗೆ ಅವನು ಬಿಟ್ಟುಹೋದರೆ ನನ್ನ ಮನಸ್ಸಿಗೆ ತುಂಬಾ ನೋವಾಗುತ್ತದೆ, ಅದಕ್ಕೆ ಅಳುತ್ತೀನಿ ಎಂದು ಬಿಕ್ಕುತ್ತಾ ಹೇಳಿದಳಂತೆ ಭೀಮವ್ವ

## ಮದುವೆ

ಭೀಮವ್ವನಿಗೆ ಮದುವೆಯಾಗುವುದೂ ತಡವಾಗಲಿಲ್ಲ ಆಗಿನ ಕಾಲದ ಪದ್ಧತಿಯಂತೆ ಅವಳಿಗೆ ಚಿಕ್ಕವಯಸ್ಸಿನಲ್ಲಿಯೇ, ಅಂದರೆ ಹನ್ನೊಂದು ವರ್ಷಕ್ಕೇ ಮದುವೆಯಾಯಿತು ಗಂಡನ ಹೆಸರು ಮುನಿಯಪ್ಪ ಅವರ ಊರೂ ಹರಪನಹಳ್ಳಿಯೇ ಆಚಾರಶೀಲರಾದ ವೈಷ್ಣವ ಕುಟುಂಬ ಅವರದು ಹಿಂದೆ ಅವರ ವಂಶಸ್ಥರು ಹರಪನಹಳ್ಳಿ ಸಂಸ್ಥಾನದಲ್ಲಿ ಬೊಕ್ಕಸದ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರಿಂದ ಅವರ ಮನೆತನಕ್ಕೆ ಬೊಕ್ಕಸದವರು ಎಂದೇ ಹೆಸರುಬಂದಿತ್ತು

ಬೊಕ್ಕಸದ ಮುನಿಯಪ್ಪನವರು ವಿದ್ಯಾವಂತರು ಶಾಸ್ತ್ರ-ಪುರಾಣಗಳನ್ನು ಚೆನ್ನಾಗಿ ಬಲ್ಲವರು ತಕ್ಕಮಟ್ಟಿಗೆ ಲೌಕಿಕ ಶಿಕ್ಷಣವನ್ನೂ ಪಡೆದಿದ್ದರು ಆದ್ದರಿಂದ ಸರ್ಕಾರಿ ಉದ್ಯೋಗವೂ ಅವರಿಗಿತ್ತು

ಆಶ್ಚರ್ಯಕರ ಸಂಗತಿಯೆಂದರೆ ಭೀಮವ್ವನನ್ನು ಮದುವೆಯಾದಾಗ ಮುನಿಯಪ್ಪನವರಿಗೆ ನಲವತ್ತೈದು ವರ್ಷ ಭೀಮವ್ವನಿಗೆ ಹನ್ನೊಂದು ವರ್ಷ ಭೀಮವ್ವ ಮುನಿಯಪ್ಪನವರಿಗೆ ನಾಲ್ಕನೆಯ ಹೆಂಡತಿ ಮೊದಲು ಮದುವೆಯಾಗಿದ್ದ ಮೂವರು ಹೆಂಡತಿಯರೂ ತೀರಿಕೊಂಡಿದ್ದರು ಹುಟ್ಟಿದ ಮಕ್ಕಳೂ ಉಳಿದಿರಲಿಲ್ಲ ಹಿರಿಯರ ಬಲವಂತಕ್ಕೆ ಮಣಿದೋ ಅಥವಾ ವಂಶೋದ್ಧಾರದ ದೃಷ್ಟಿಯಿಂದಲೋ ಮುನಿಯಪ್ಪ ನಾಲ್ಕನೆಯ ಮದುವೆಗೆ ಸಮ್ಮತಿಸಿದರೆಂದು ತೋರುತ್ತದೆ ನಿಜಕ್ಕೂ ಇದು ವಿಧಿಯ ವಿಚಿತ್ರ ಕೈವಾಡವೇ ಸರಿ

**ಸರಳ ಜೀವನ—ಪತಿವಿಯೋಗ**

ಗಂಡನ ಮನೆಯವರು ಭೀಮವ್ವನಿಗೆ ಕೃಷ್ಣಾಬಾಯಿ ಎಂಬ ಹೊಸ ಹೆಸರನ್ನು ಇಟ್ಟು ಮನೆ ತುಂಬಿಸಿಕೊಂಡರು ಆದರೆ ಭೀಮವ್ವ ಎಂಬ ಹೆಸರೇ ಹೆಚ್ಚು ಬಳಕೆಯಲ್ಲಿ ಬಂದುದರಿಂದ ಅವಳು ಆ ಹೆಸರಿನಿಂದಲೇ ಮುಂದೆ ಪ್ರಸಿದ್ಧಳಾದಳು

ಗಂಡನ ಮನೆಯಲ್ಲಿ ಭೀಮವ್ವ ಎಲ್ಲರ ಪ್ರೀತಿಗೂ ಪಾತ್ರಳಾದಳು ಯಾರ ಮನಸ್ಸನ್ನೂ ಅವಳು ನೋಯಿಸುತ್ತಿರಲಿಲ್ಲ ಪತಿಗೆ ಅನುವರ್ತಿನಿಯಾಗಿದ್ದುದರಿಂದ ಅವಳ ದಾಂಪತ್ಯ ಜೀವನ ಸುಖಕರವಾಗಿತ್ತು ಗಂಡನಾದ ಮುನಿಯಪ್ಪನವರು ಭೀಮವ್ವನ ದೈವಭಕ್ತಿಗೆ ಎಂದೂ ವಿರೋಧ ಮಾಡುತ್ತಿರಲಿಲ್ಲ ಅವರಿಗೂ ದೇವರಲ್ಲಿ ಅವಿಚ್ಛಿನ್ನವಾದ ಭಕ್ತಿಯಿತ್ತು ಭೀಮವ್ವ ಮಾಡುತ್ತಿದ್ದ ವ್ರತ ನೇಮಗಳಲ್ಲಿ ಮುನಿಯಪ್ಪನವರೂ ತುಂಬುಹೃದಯದಿಂದ ಸಹಕರಿಸುತ್ತಿದ್ದರು

ದಂಪತಿಗಳಿಗೆ ಕೆಲವು ವರ್ಷಗಳು ಕಳೆದರೂ ಸಂತಾನವಾಗಲಿಲ್ಲ ಆ ನಂತರ ಒಬ್ಬ ಗಂಡುಮಗ ಅವರಿಗೆ ಹುಟ್ಟಿದನು ಅವನಿಗೆ 'ಸ್ವಾಮಿರಾಯ ಎಂದು ಹೆಸರಿಟ್ಟರು ಮತ್ತೆ ನಾಲ್ಕು ವರ್ಷಗಳ ನಂತರ ಹೆಣ್ಣುಮಗುವೊಂದು ಹುಟ್ಟಿತು ಅದಕ್ಕೆ ಸುಬ್ಬಮ್ಮ" ಎಂದು ನಾಮಕರಣ ಮಾಡಿದರು

ಮಕ್ಕಳ ಆಟಪಾಠಗಳಿಂದ ದಂಪತಿಗಳು ಆನಂದಿತರಾಗಿದ್ದರು ತಕ್ಕಮಟ್ಟಿಗೆ ಶ್ರೀಮಂತಿಕೆಯಿದ್ದುದರಿಂದ ಅವರಿಗೆ ಯಾವ ಕೊರತೆಯೂ ಉಂಟಾಗಲಿಲ್ಲ ಭೀಮವ್ವನ ಕೈಹಿಡಿದ ಅದೃಷ್ಟದಿಂದಲೋ ಏನೋ ಮುನಿಯಪ್ಪನವರು ತಮ್ಮ ಉದ್ಯೋಗದಲ್ಲಿ ಬಡ್ತಿಹೊಂದಿ ಉನ್ನತವಾದ ಹದ್ದೆಗೆ ಏರಿದ್ದರು ಆದರೆ ಭೀಮವ್ವ ಮಾತ್ರ ಆಡಂಭರರಹಿತಳಾಗಿ ಸರಳವಾದ ಜೀವನ ನಡೆಸುತ್ತಿದ್ದಳು ಮನೆಯಲ್ಲಿ ಬೇಕಾದಷ್ಟು ಒಡವೆ, ವಸ್ತುಗಳಿದ್ದರೂ ಅವಳು ಅವುಗಳನ್ನು ಧರಿಸುತ್ತಿರಲಿಲ್ಲ ಬಿದ್ದುಹೋಗುವ ಈ ದೇಹಕ್ಕೇಕೆ ಎದ್ದುಕಾಣುವ ಸಿಂಗಾರ ಎಂದು ಅವಳು ಹೇಳುತ್ತಿದ್ದಳು ಗಂಡನ ಅನುಮತಿಯನ್ನು ಪಡೆದು ಅವಳು ಧಾರಾಳವಾಗಿ ದಾನ–ಧರ್ಮಗಳನ್ನು ಮಾಡುತ್ತಿದ್ದಳು ಬಡಜನರನ್ನು ಕಂಡರೆ ಭೀಮವ್ವ

ನಿಗೆ ಅಪಾರ ಅನುಕಂಪವಿತ್ತು ಮನೆಬಾಗಿಲಿಗೆ ಬರುವ ಭಿಕ್ಷುಕರೊಬ್ಬರನ್ನೂ ಅವಳು ಬರಿಗೈಯಲ್ಲಿ ಕಳಿಸುತ್ತಿರಲಿಲ್ಲ

ಸಂಪತ್ತಿನ ಮೇಲೆ ಅವಳಿಗಿದ್ದ ಅಲಕ್ಷ್ಯವೇ ಕಾರಣವೆಂಬಂತೆ ಮನೆಯಲ್ಲಿ ಒಂದುಸಲ ಕಳ್ಳತನವಾಯಿತು ಬೆಲೆಬಾಳುವ ಒಡವೆ, ವಸ್ತುಗಳನ್ನೆಲ್ಲಾ ಕಳ್ಳರು ದೋಚಿದರು ಇದಾದ ನಂತರ ಮನೆಯಲ್ಲಿ ಹಂತ ಹಂತವಾಗಿ ಕುಂದುಕೊರತೆಗಳು ಕಾಣಿಸಿಕೊಳ್ಳತೊಡಗಿದವು ಮುನಿಯಪ್ಪನವರೂ ತೀವ್ರವಾದ ಖಾಯಿಲೆಯಿಂದ ಹಾಸಿಗೆ ಹಿಡಿದರು ವೈದ್ಯರು ಬಂದು ಚಿಕಿತ್ಸೆ ನಡೆಸಿದರು ಆದರೆ ಪ್ರಯೋಜನವಾಗಲಿಲ್ಲ ಅದು ಮರಣಾಂತಿಕ ರೋಗವಾಗಿತ್ತು ಒಂದು ದಿನ ಮುನಿಯಪ್ಪನವರು ದೇಹತ್ಯಾಗ ಮಾಡಿ ಪ್ರಾಪಂಚಿಕ ಕೋಟಲೆಗಳಿಂದ ಮುಕ್ತರಾದರು ಆಗ ಭೀಮವ್ವನಿಗೆ ಮೂವತ್ತೈದು ವರ್ಷ ವಯಸ್ಸಾಗಿತ್ತು

## ಬದಲಾದ ಬದುಕು

ಪತಿವಿಯೋಗವಾದ ನಂತರ ಭೀಮವ್ವನಲ್ಲಿ ಅನೇಕ ಬದಲಾವಣೆಗಳಾದವು ಕುಲಪದ್ಧತಿಯಂತೆ ಅವಳು ಕೇಶಮುಂಡನವನ್ನು ಮಾಡಿಸಿಕೊಂಡು ಮಡಿಯಾದಳು ಜೀವನದ ಯೌವನಾವಸ್ಥೆಯಲ್ಲಿಯೇ ಒದಗಿದ ಈ ಆಘಾತದಿಂದ ಅವಳಿಗೆ ಪ್ರಾಪಂಚಿಕ ವಿಷಯಗಳ ಕಡೆಗೆ ವೈರಾಗ್ಯ ಭಾವನೆ ಬೆಳೆಯಿತು ಚಿಕ್ಕಂದಿನಿಂದಲೂ ಅವಳಿಗೆ ದೇವರಲ್ಲಿ ಅತೀವ ಭಕ್ತಿಯಿತ್ತು ಅದೀಗ ಹುಲುಸಾಗಿ ಬೆಳೆಯಿತು

ತನಗೆ ಬಂದ ವೈಧವ್ಯವನ್ನು ಭೀಮವ್ವ ಶಾಪವೆಂದು ಪರಿಗಣಿಸಿ ಕೊರಗಲಿಲ್ಲ ಎಲ್ಲವೂ ದೇವರ ಚಿತ್ತವೆಂದು ಅವಳು ನಿಶ್ಚಿಂತಳಾದಳು ಮುಂದಿನ ಬಾಳುವೆಯನ್ನು ಒಂದು ತಪಸ್ಸಿನಂತೆ ತಿಳಿದು ಕೃಷ್ಣಾರ್ಪಣ ಬುದ್ಧಿಯಿಂದ ಬದುಕಬೇಕೆಂದು ಅವಳು ತೀರ್ಮಾನಿಸಿದಳು

ಮನೆ ಕೆಲಸವೆಲ್ಲಾ ಮುಗಿದ ಮೇಲೆ ಸಾಮಾನ್ಯವಾಗಿ ಹೆಂಗಸರು ಮಾಡುವಂತೆ ಭೀಮವ್ವ ನೆರೆಯುವರೊಂದಿಗೆ ಹರಟೆ ಹೊಡೆಯುತ್ತಾ ಕಾಲ ಕಳೆಯುತ್ತಿರಲಿಲ್ಲ ಒಂದುಕಡೆ ಏಕಾಂತದಲ್ಲಿ ಕುಳಿತು ಅವಳು ದೇವರ ಚಿಂತನೆ ನಡೆಸುತ್ತಾ ಅಂತರ್ಮುಖಿಯಾಗುತ್ತಿದ್ದಳು ಗಂಟೆಗಟ್ಟಲೆ ದೇವರ ಭಜನೆ ಮಾಡುತ್ತಿದ್ದಳು

ದಿನದ ಬಹುಭಾಗವನ್ನೆಲ್ಲಾ ಭಗವಂತನ ಚಿಂತನೆಯಲ್ಲಿಯೇ ಕಳೆಯುತ್ತಿದ್ದ ಭೀಮವ್ವನಿಗೆ ಮನಸ್ಸಿನ ತುಂಬಾ ಭಗವಂತನೇ ತುಂಬಿಕೊಂಡಿದ್ದನು ರಾತ್ರಿ ಸ್ವಪ್ನದಲ್ಲಿ ಸಹ ದೈವೀಕ ವಿಷಯಗಳೇ ಗೋಚರಿಸುತ್ತಿದ್ದವು

ಒಂದು ಸಾರಿ ಭೀಮವ್ವನಿಗೆ ಸ್ವಪ್ನದಲ್ಲಿ ತೇಜಸ್ವಿಯಾದ ಬ್ರಾಹ್ಮಣರ ಮತ್ತು ದೊಡ್ಡದಾದ ಒಂದು ಕೃಷ್ಣಸರ್ಪದ ದರ್ಶನವಾಯಿತು ಕೈಯಲ್ಲಿ ತಂಬೂರಿಯನ್ನು ಹಿಡಿದುಕೊಂಡಿದ್ದ ಅವರು ಆ ಸರ್ಪಕ್ಕೆ ಭೀಮವ್ವನ ನಾಲಿಗೆಯ ಮೇಲೆ ಮೂರು ಅಕ್ಷರ ಬರೆಯುವುದಕ್ಕೆ ಹೇಳಿದರಂತೆ ಅದೇ ರೀತಿ ಸರ್ಪ ಅವಳ ನಾಲಿಗೆಯ ಮೇಲೆ ಅಕ್ಷರಗಳನ್ನು ಬರೆದ ನಂತರ ಆ ಬ್ರಾಹ್ಮಣರು ಭೀಮವ್ವನನ್ನು ಆಶೀರ್ವದಿಸಿದರಂತೆ

ತಂಬೂರಿಯನ್ನು ಹಿಡಿದಿದ್ದ ಆ ಬ್ರಾಹ್ಮಣರೇ ನಾರದರೆಂದೂ ಅವರಿಂದ ಆಶೀರ್ವಾದ ಪಡೆದ ನಂತರವೇ ಭೀಮವ್ವನಿಗೆ ಕಾವ್ಯ ರಚಿಸುವ ಸಾಮರ್ಥ್ಯ ಉಂಟಾಯಿತೆಂದೂ ಹೇಳುತ್ತಾರೆ

## ಹಾಡುಗಳ ಸ್ಫುರಣೆ

ತೇಜಸ್ವೀ ಬ್ರಾಹ್ಮಣರೊಬ್ಬರಿಂದ ಸ್ವಪ್ನ ಮುಖೇನ ಉಪದೇಶ ಪಡೆದ ನಂತರ ಬೀಮವ್ವನ ಚಿಂತನಶಕ್ತಿ ಹೆಚ್ಚಿತು ಅವಳ ಮನೋವ್ಯಾಪಾರದಲ್ಲಿಯೇ ವಿಶೇಷ ಬದಲಾವಣೆಗಳು ಕಂಡುಬಂದವು ಅವಳಲ್ಲಿ ಸುಪ್ತವಾಗಿ ಹುದುಗಿದ್ದ ಪ್ರತಿಭೆಯ ಪುಷ್ಪ ಪೂರ್ಣ ವಿಕಾಸಗೊಂಡಿತು ಭೀಮವ್ವ ಕೆಲವೊಮ್ಮೆ ಭಾವಾವಿಷ್ಟಳಾಗಿ ದೇವರ ಮುಂದೆ ಕುಳಿತು ನಿರರ್ಗಳವಾಗಿ ಹಾಡುತ್ತಿದ್ದಳು ಪರಮಾತ್ಮನ ಗುಣಗಾನಗಳಿಂದ ಕೂಡಿರುತ್ತಿದ್ದ ಆ ಹಾಡುಗಳು ಅವಳಿಂದಲೇ ರಚಿತವಾದಂಥವು ಸರಳವಾದ ಪದಪಂಕ್ತಿಗಳಿಂದ ಕೂಡಿದ್ದು ರಾಗಬದ್ಧವಾಗಿರುತ್ತಿದ್ದವು ಭೀಮವ್ವನ ಕಂಠವೂ ಮಧುರವಾಗಿತ್ತು ಹಾಗಾಗಿ ಅವಳ ಹಾಡುಗಳನ್ನು ಕೇಳುವವರ ಮನಸ್ಸುಗಳು ಭಕ್ತಿ-ಭಾವದಿಂದ ಪುಳಕಿತಗೊಳ್ಳುತ್ತಿದ್ದವು

ಸೋಜಿಗದ ಸಂಗತಿಯೆಂದರೆ ಭೀಮವ್ವನಿಗೆ ಓದಲು ಬರುತ್ತಿರಲಿಲ್ಲ ಬರೆಯುವುದಕ್ಕಂತೂ ಮೊದಲೇ ಬರುತ್ತಿರಲಿಲ್ಲ ಆದರೂ ಅವಳು ದೇವರ ಆಸು

ಗ್ರಹದಿಂದ ದಿನನಿತ್ಯವೂ ತಿಳಿಗನ್ನಡದಲ್ಲಿ ಹಾಡುಗಳನ್ನು, ಕಥನ-ಕಾವ್ಯಗಳನ್ನು ರಚಿಸುತ್ತಿದ್ದಳು ಹತ್ತಿರವಿರುತ್ತಿದ್ದ ಅವಳ ಬಂಧುಗಳು ಭೀಮವ್ವ ಹೇಳುತ್ತಿದ್ದ ಹಾಡುಗಳನ್ನು ಬರೆದಿಡುತ್ತಿದ್ದರು ಮುಂದೆ ಅವಳು ಹಾಡು ಹೇಳುವುದು ಹೆಚ್ಚಾದಾಗ ಅವುಗಳನ್ನು ಬರೆದುಕೊಳ್ಳಲಿಕ್ಕಾಗಿಯೇ ಒಬ್ಬರನ್ನು ನೇಮಿಸಿದರಂತೆ

ಭೀಮವ್ವನ ಕೃತಿಗಳ ರಚನೆಯಲ್ಲಿ ಸ್ವಪ್ನಾನುಭವಗಳು ಪ್ರಮುಖ ಪಾತ್ರ ವಹಿಸಿರುವುದು ಕಂಡುಬರುತ್ತವೆ ಹಿಂದಿನ ದಿವಸ ಬಿದ್ದ ಸ್ವಪ್ನಗಳು ಆಕೆಗೆ ಪ್ರೇರಕ ಶಕ್ತಿಯಾಗಿ ನಿಂತು ಹಲವಾರು ಹಾಡುಗಳಿಗೆ ಕಾರಣವಾಗಿರುತ್ತವೆ ಒಮ್ಮೆ ಭವಾನಿಪತಿಯಾದ ರುದ್ರದೇವರು ಕನಸಿನಲ್ಲಿ ಕಾಣಿಸಿಕೊಂಡು ನಾನು ಪರಮ ವೈಷ್ಣವ ಎಂದು ಹೇಳಿದರಂತೆ ಮರುದಿನ ಬೆಳಿಗ್ಗೆ ಭೀಮವ್ವ ಸ್ಫೂರ್ತಿಯಿಂದ ರಕ್ಷಿಸಬೇಕೆನ್ನ ಲಕ್ಷ್ಮೀನರಸಿಂಹನ ಬಕ್ತನೆನಿಸಿದ ಭವಾನಿ ಪತೇ ಎಂಬ ಹಾಡನ್ನು ಕಟ್ಟಿ ರುದ್ರದೇವರನ್ನು ಸ್ತೋತ್ರ ಮಾಡಿದಳು ಈ ಹಾಡು ಭೀಮವ್ವ ರಚಿಸಿದ ಮೊದಲ ಹಾಡು ಎಂಬ ಹೇಳಿಕೆಯಿದೆ

ತನಗೆ ಹಾಡುಗಳನ್ನು ರಚಿಸಲು ಬರುತ್ತದೆ ಎಂದು ಭೀಮವ್ವ ಯಾರ ಮುಂದೆಯೂ ಹೇಳಿಕೊಳ್ಳುತ್ತಿರಲಿಲ್ಲ ಮಿತಭಾಷಿಣಿಯಾದ ಅವಳಿಗೆ ಪ್ರಚಾರ ಕೀರ್ತಿ ಮುಂತಾದವುಗಳಲ್ಲಿ ಸ್ವಲ್ಪವೂ ನಂಬಿಕೆಯಿರಲಿಲ್ಲ ಅವುಗಳು ಸಾಧನೆಗೆ ಪ್ರತಿಬಂಧಕವಾಗುತ್ತದೆ ಎಂಬುದು ಅವಳ ಭಾವನೆಯಾಗಿತ್ತು

ಇದೇ ಸಂದರ್ಭದಲ್ಲಿ ಶಿರಹಟ್ಟಿ ವೆಂಕಟರಾಯ ಎಂಬ ಒಬ್ಬ ವ್ಯಕ್ತಿ ಹರಪನಹಳ್ಳಿಯಲ್ಲಿದ್ದನು ಅವನು "ನಾನೂ ಕವನ ಕಟ್ಟುವೆ ನೆಂದು ತಿದ್ದಿ-ತೀಡಿ ಬಹು ಪ್ರಯಾಸದಿಂದ ಕೆಲವು ಕವನಗಳನ್ನು ಬರೆಯುತ್ತಿದ್ದನು 'ಕವನ ಕಟ್ಟುವ' ಅವನ ಗೀಳು ಕ್ರಮೇಣ ವೈಪರೀತ್ಯಕ್ಕೆ ತಿರುಗಿ ಅವನ ಮನಸ್ಸಿನ ಮೇಲೆ ತೀವ್ರವಾದ ಪರಿಣಾಮ ಬೀರಿತ್ತು ಆತ ಹುಚ್ಚನಂತೆ ಊರೆಲ್ಲಾ ತಿರುಗುತ್ತಾ ಏನೇನೋ ಬಡಬಡಿಸುತ್ತಿದ್ದನು ಅವನಿಂದ ಜನರಿಗೆ ತೊಂದರೆಯಾಗಬಹುದೆಂದು ಒಂದು ಕಂಬಕ್ಕೆ ಅವನನ್ನು ಕಟ್ಟಿಹಾಕುತ್ತಿದ್ದದ್ದೂ ಉಂಟು ಇದೆಲ್ಲವನ್ನೂ ನೋಡುತ್ತಿದ್ದ ಭೀಮವ್ವನ ಮನೆಯವರು ಆಕೆಗೆ ವೆಂಕಟರಾಯನ ಸ್ಥಿತಿಯನ್ನು ನೆನಪಿಸಿ ಹಾಡುಕಟ್ಟುವ ಬಗ್ಗೆ ಎಚ್ಚರಿಕೆ ನೀಡಿದ್ದರು ಇನ್ನೂ ಸಣ್ಣ ಹೆಂಗಸಾದ

ನಿನಗೆ ಆ ವೆಂಕಟರಾಯನ ಗತಿಯೋ ಎಂದರೆ ಮನೆತನದ ಗೌರವ ಮಣ್ಣುಪಾಲಾಗುವುದು ಎಂದು ಹೆದರಿಸುತ್ತಿದ್ದರು

ಇದರಿಂದಾಗಿ ಭೀಮವ್ವ ಹಾಡುಗಳನ್ನು ಕಟ್ಟಿ ಹಾಡಲು ಹಿಂಜರಿಯುತ್ತಿದ್ದಳು ಮುಂದೆಯೂ ಹೀಗೇ ಸುಲಲಿತವಾಗಿ ಹಾಡುಗಳನ್ನು ರಚಿಸಿ ಹೇಳಲು ಸಾಧ್ಯವಾಗುತ್ತದೆ ಎಂಬ ನಿಶ್ಚಯವೇನು ? ಆ ವೆಂಕಟರಾಯನಿಗಾದಂತೆ ನನಗೂ ಆದರೆ ಮರ್ಯಾದೆ ಮೂರು ಕಾಸಾಗುತ್ತದೆ ಆದ್ದರಿಂದ ಸುಮ್ಮನಿರುವುದೇ ಸರಿ" ಎಂಬ ಭಾವನೆಯಿಂದ ಕೆಲವು ದಿನ ಅವಳು ತಟಸ್ಥಳಾಗಿದ್ದಳು ಆದರೆ ಭೀಮವ್ವನಿಗೆ ಹೆಚ್ಚು ಸಮಯ ಸುಮ್ಮನಿರುವುದು ಸಾಧ್ಯವಾಗಲಿಲ್ಲ ಹಾಡು ರಚಿಸಬೇಕೆಂಬ ಒತ್ತಾಸೆ ಅವಳನ್ನು ಪ್ರತಿನಿತ್ಯ ಕಾಡಿಸುತ್ತಿತ್ತು ಹಾಡು ಹೇಳದಿದ್ದರೆ ತಲೆನೋವು, ಸಂಕಟ ಹೊಟ್ಟೆನೋವು ಇತ್ಯಾದಿ ವೇದನೆಗಳು ಪ್ರಾರಂಭವಾಗುತ್ತಿದ್ದವು ಅಲ್ಲದೆ ಒಂದು ದಿನ ಆಕೆಯ ಸ್ವಪ್ನದಲ್ಲಿ ಋಷಿಗಳಂತಿದ್ದ ಒಬ್ಬರು ಕಾಣಿಸಿಕೊಂಡು 'ನಾವು ಹೇಳಿಕೊಡುವ ಮಂತ್ರವನ್ನು ನೀನೇಕೆ ಹೇಳುತ್ತಿಲ್ಲ ಎಂದು ಸ್ವಲ್ಪ ಸಿಟ್ಟಿನಿಂದಲೇ ಕೇಳಿದರಂತೆ

ಆದರೂ ಭೀಮವ್ವನಿಗೆ ಒಂದು ಸಂಶಯವಿತ್ತು ಎಲ್ಲಾ ಹರಿದಾಸರ ಕೀರ್ತನೆಗಳಿಗೆ ಕೊನೆಯಲ್ಲಿ ಅಂಕಿತವಿರುತ್ತದೆ ಆದರೆ ನನಗೆ ಯಾವ ಅಂಕಿತವೂ ಇಲ್ಲವಲ್ಲಾ ಕೀರ್ತನೆಗಳನ್ನು ನಾನು ಯಾವ ಮುದ್ರಿಕೆಯಿಂದ ರಚಿಸಬೇಕು" ಎಂದು ಯೋಚಿಸುತ್ತಿದ್ದಳು ಅಂದು ರಾತ್ರಿಯೇ ಅವಳ ಕನಸಿನಲ್ಲಿ ತಂಬೂರಿ ಹಿಡಿದ ದಾಸರೊಬ್ಬರು ದರ್ಶನ ನೀಡಿ ನಿನ್ನ ತವರ ಮನೆಯ ಹೆಸರಾದ ಭೀಮವ್ವ ಮತ್ತು ಗಂಡನ ಮನೆಯ ಹೆಸರಾದ ಕೃಷ್ಣಾಬಾಯಿ ಎಂಬ ಎರಡೂ ಹೆಸರುಗಳನ್ನು ಸೇರಿಸಿಕೊಂಡು ಭೀಮೇಶಕೃಷ್ಣ' ಎಂಬ ಅಂಕಿತವನ್ನು ಇಟ್ಟುಕೋ ಭೀಮೇಶಕೃಷ್ಣ ಎನ್ನುವುದು ಹರಿವಾಯುಗಳ ಹೆಸರಾಗಿದೆ ಇನ್ನು ಮುಂದೆ ನಿನ್ನ ಕೃತಿಗಳನ್ನು ನೀನು ಭೀಮೇಶಕೃಷ್ಣನಿಗೆ ಅರ್ಪಣೆ ಮಾಡು ಇದರಿಂದ ಶುಭವಾಗುವುದು' ಎಂದು ಹೇಳಿದರಂತೆ ಅಲ್ಲದೆ ತಾವೇ "ಭೀಮೇಶಕೃಷ್ಣ'ನ ಮುದ್ರಿಕೆಯಿಂದ ಪ್ರಾಣದೇವರ ಮೇಲೆ ಒಂದು ಕೀರ್ತನೆಯನ್ನು ರಚಿಸಿ ಭೀಮವ್ವನಿಗೆ ಉಪದೇಶಿಸಿದರಂತೆ ವಾಯುದೇವರ ಮೂರು ಅವತಾರಗಳನು ಸುಂದರವಾಗಿ ವರ್ಣಿಸುವ ಆ ಕೀರ್ತನೆ ಎನ್ನು ಇಲ್ಲಿ ಕೊಡಲಾಗಿದೆ

ಯಾತಕವನಿಯೊಳ್ ಜನಿಸಿದೆ ನಾನು । ಸಾರ್ಥಕೇನು
ನೀತಿಯಿಲ್ಲದ ಮಾತಲಿ ಕಾಲಕಳೆವೆ ನಾನು । ಕೋತಿ ಸಾರ್ಥಕೇನು ॥ಪ॥

ಶರಧಿ ಹಾರಿ ಉರಿವಿಲಂಕೆಯನರಿವೆನೇನೋ ವಾರ್ತೆ
ತಿರುಗಿ ಮಾರ್ಗವ ಮಾಡಿ ಮಾತೆಯ ತರುವೆನೇನೋ ॥ ೧ ॥

ಕಿತ್ತು ಸಂಜೀವನವ ಬೆಟ್ಟಲ್ಲಿರಿಸುವೆನೇನೋ ರಾಮ–
ರ್ಥತ್ರಿಸ್ವಾಹನನಾಗಿ ಖ್ಯಾತಿಪಡೆವೆನೇನೋ ॥ ೨ ॥

ಇಂದಿರೇಶ ಕೊಡಲು ಪದವಿ ಒಲ್ಲೆಂಬೆನೇನೋ ರಾಮ–
ರೆಂಜಲೆಲೆಗ್ವಾರ್ಥೈಸಿ ಕದ್ದೊಯ್ದುಂಬೆನೇನೋ ॥ ೩ ॥

ಮುನ್ನ ಹರಿಯಸೇವೆಗೆಂದು ಜನಿಸಿದೆನೇನೋ ಧರೆಯೊಳ್
ಧರ್ಮ ಮೀರದೆ ನಡೆದು ಖ್ಯಾತಿಪಡೆವೆನೇನೋ ॥ ೪ ॥

ರಾಜಸೂಯಯಾಗಾಶ್ವಮೇಧ ಸಾಧಿಸುವೆನೇನೋ ರಾಜ್ಯ
ಭೇದಿಸಿ ಶತ್ರುಗಳಿಗೆ ಭಯವ ತೋರುವೆನೇನೋ ॥ ೫ ॥

ಕ್ಲೇಶಮನಕ್ಕಿಲ್ಲದೆ ವನವಾಸ ಸಹಿಸುವೆನೇನೋ ಅಜ್ಞಾತ–
ವಾಸೊಂದು ಕ್ಷಣ ಪರಿಯಂತರ ಚರಿಸುವೆನೇನೋ ॥ ೬ ॥

ಭಿಕ್ಷೆತನ ಕೊಂಬೋ ಸಜ್ಜನರಿಗೆ ನಮಿಸುವೆನೇನೋ ಬೋರೆ–
ವೃಕ್ಷಮೂಲದಲ್ಲಿ ಆವಾಸ ಬಯಸುವೆನೇನೋ ॥ ೭ ॥

ಪಾದಕ್ಕೆರಗುವ ಪ್ರಾಣೇಶ ನೀ ಪಾಲಿಸುವ್ವೇನೋ ಜ್ಞಾನ–
ಆದಿಮೂರುತಿ ವೇದವ್ಯಾಸನ ಒಲಿಸುವೆನೇನೋ ॥೮॥

ಬಿಟ್ಟು ಚಲಿಸದೆ ನಿನ್ನಲ್ಲೆ ಮನಸಿಟ್ಟೆನೇನೋ ವಾ–
ಸಿಷ್ಠ ಭೀಮೇಶಕೃಷ್ಣನ ಭಜಿಸುತ್ತಿರುವೆನೇನೋ ॥ ೯ ॥

ಅಂದಿನಿಂದ ಭೀಮವ್ವ "ಭೀಮೇಶಕೃಷ್ಣ ' ಎಂಬ ಅಂಕಿತವನ್ನು ಬಳಸಿ ಕೀರ್ತನೆಗಳನ್ನು ರಚಿಸಲು ತೊಡಗಿದಳು ಅವಳು ರಚಿಸಿದ ಕೀರ್ತನೆಗಳು ಅರ್ಥ

ಭರಿತವಾಗಿರುತ್ತಿದ್ದವು ಸರಸವಾದ ಶೈಲಿಯಲ್ಲಿ ಚಿತ್ರಿತವಾಗಿರುತ್ತಿದ್ದವು ಮನೋಜ್ಞವಾದ ಜೀವಂತ ವರ್ಣನೆಗಳಿಂದ ಕೂಡಿರುತ್ತಿದ್ದವು ಆಚಾರ್ಯ ಮಧ್ವರು ಬೋಧಿಸಿದ ದ್ವೈತ ಸಿದ್ಧಾಂತಕ್ಕೆ ಅನುಗುಣವಾಗಿರುತ್ತಿದ್ದವು ರಾಮಾಯಣ, ಮಹಾಭಾರತ, ಭಾಗವತ ಮುಂತಾದ ಪುರಾಣ ಪುಣ್ಯಕಥೆಗಳಲ್ಲಿ ಭೀಮವ್ವನಿಗೆ ಇದ್ದ ಆಳವಾದ ಜ್ಞಾನವನ್ನು ಕಂಡು ವಿದ್ವಾಂಸರು ಸಹ ಬೆರಗಾಗುತ್ತಿದ್ದರು

ಭೀಮವ್ವನಿಗೆ ಭೀಮೇಶಕೃಷ್ಣನೇ ಮಗುವಾಗಿ, ಜೊತೆಗಾರನಾಗಿ ತಂದೆಯಾಗಿ, ಸ್ವಾಮಿಯಾಗಿ ಆರಾಧ್ಯದೇವನಾಗಿ ನಾನಾ ವಿಧವಾದ ಲೀಲೆಗಳನ್ನು ತೋರಿಸಿದನು

## ಚೆಂಡನೆಂದರೂ ಹೊಮ್ಮುವ ಹಾಡು

ಕಸ್ತೂರಿಯ ಕಂಪು ತಾನಾಗಿ ಹರಡುವ ಹಾಗೆ ಭೀಮವ್ವನ ಅಸಾಮಾನ್ಯವಾದ ಪ್ರತಿಭಾಶಕ್ತಿ ಸುತ್ತಮುತ್ತಲಿನ ಗ್ರಾಮಸ್ಥರಿಗೆಲ್ಲಾ ತಿಳಿಯತೊಡಗಿತು ಬಹಳ ಜನ ಅವಳ ಬಗ್ಗೆ ಪೂಜ್ಯವಾದ ಭಾವನೆಗಳನ್ನು ಹೊಂದಿದ್ದರು ಕೆಲವು ಹೆಂಗಸರು ಅವಳ ಹಾಡಿನ ಮೋಡಿಗೆ ವಶವಾಗಿ ತಮಗೆ ಇಷ್ಟವಾದ ಹಾಡುಗಳನ್ನು ಅವಳಿಂದ ಹೇಳಿಸಿಕೊಂಡಿದ್ದರು ಪ್ರತಿನಿತ್ಯವೂ ಮನೆಯಲ್ಲಿ ಅವುಗಳನ್ನು ಭಕ್ತಿಯಿಂದ ಹೇಳಿಕೊಳ್ಳುತ್ತಿದ್ದರು

ಬೀಮವ್ವನ ಬಗ್ಗೆ ಗೌರವ ಭಾವನೆಯನ್ನು ಹೊಂದಿದ್ದವರು ಇದ್ದ ಹಾಗೆ ಅವಳ ಕಾವ್ಯ ರಚನಾ ಸಾಮರ್ಥ್ಯ ಮತ್ತು ಕಂಠಮಾಧುರ್ಯಗಳನ್ನು ಕಂಡು ಮಾತ್ಸರ್ಯಪಡುವವರೂ ಕೆಲವರಿದ್ದರು ಅವರು ಭೀಮವ್ವನನ್ನು ತೀರ ಕೇವಲವಾಗಿ ಕಾಣುತ್ತಿದ್ದರು ಕವಿತಾ ಮಾಡುವ ದಾಸಿ ಎಂದು ಹಿಂದಿನಿಂದ ಹೀಗಳೆಯುತ್ತಿದ್ದರು ಆ ವಿಚಾರ ಭೀಮವ್ವನಿಗೂ ತಿಳಿದಿತ್ತು ಆದರೆ ಅದನ್ನು ಅವಳು ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ "ಹಂಗಿಸುವವರೆಲ್ಲಾ ನನ್ನ ಹಿತಚಿಂತಕರು ಎಂಬ ಉದಾತ್ತವಾದ ಭಾವನೆಯಿಂದ ಅವಳು ತನ್ನನ್ನು ಅಸಡ್ಡೆ ಮಾಡುವವರಲ್ಲೂ ಆದರವನ್ನು ಮಾಡುತ್ತಿದ್ದಳು

ಒಂದೊಂದು ಸಲ ಜನಗಳ ಅಪಹಾಸ್ಯ ಮತ್ತು ಚುಚ್ಚುನುಡಿಗಳು ಮಿತಿ ಮೀರಿದಾಗ ಬೇಸರಗೊಂಡು 'ಇನ್ನು ಮುಂದೆ ಹಾಡುಗಳನ್ನು ಹೇಳಕೂಡದು' ಎಂದು ಭೀಮವ್ವ ತೀರ್ಮಾನ ಮಾಡುತ್ತಿದ್ದಳು ಆದರೆ ಅದು ಅವಳಿಂದ ಸಾಧ್ಯ ವಾಗುತ್ತಿರಲಿಲ್ಲ ಭಕ್ತಿಪರವಶಳಾಗಿದ್ದಾಗ ಬೀಮವ್ವ ಮೈಮರೆಯುತ್ತಿದ್ದಳು ಆಗ ಅವಳಿಗೆ -ಳಿಯದ ಹಾಗೆ ಅವಳಿಂದ ಹಾಡುಗಳು ಹೊರಹೊಮ್ಮುತ್ತಿದ್ದವು



# ಕೃತಿಗಳ ಪರಿಚಯ

ಭೀಮವ್ವ ಸುಮಾರು ನೂರಅರವತ್ತು ಕೃತಿಗಳನ್ನು ರಚಿಸಿದಳೆಂದು ತಿಳಿದುಬರುತ್ತದೆ ಆದರೆ ಅವಳ ಬಹಳಷ್ಟು ಕೃತಿಗಳಿಗೆ ಇನ್ನೂ ವ್ಯಾಪಕವಾದ ಪ್ರಚಾರ ಸಿಕ್ಕಿಲ್ಲ ಇತ್ತೀಚೆಗೆ ಕೆಲವು ಮಾತ್ರ ಅಲ್ಲಲ್ಲಿ ಅಚ್ಚಾಗಿರುವುದು ಕಂಡು ಬರುತ್ತವೆ ಭೀಮವ್ವನ ವಂಶಸ್ಥರು ಮಾತ್ರ ಅವಳ ಎಲ್ಲಾ ಕೃತಿಗಳನ್ನೂ ಬಹಳ ಜೋಪಾನವಾಗಿ ಉಳಿಸಿಕೊಂಡು ಬಂದಿದ್ದಾರೆ ಸರಳವಾದ ತಿರುಳಿನ, ತಿಳಿಯಾದ ಶೈಲಿಯ ಅವಳ ಕೃತಿಗಳಿಗೆ ವ್ಯಾಪಕವಾದ ಪ್ರಚಾರ ಸಿಕ್ಕದಿದ್ದರೂ ಜನಗಳು ಅವುಗಳನ್ನು ಮರೆತಿಲ್ಲ ಭಕ್ತಿಯ ಸುಂದರ ಚೌಕಟ್ಟಿನೊಳಗೆ ಅಮೂಲ್ಯವಾದ ಅಧ್ಯಾತ್ಮ ನಿಧಿಯನ್ನೇ ಅಡಗಿಸಿಕೊಂಡಿರುವ ಅವಳ ಕೃತಿಗಳು ಜನ–ಜೀವನದೊಂ ದಿಗೆ ಜನಪದ ಗೀತೆಗಳಂತೆ ಬೆರೆತುಹೋಗಿವೆ

ಭೀಮವ್ವನ ಕೃತಿಗಳಲ್ಲಿ ದೀರ್ಘವಾದ ಹಾಡುಗಳು (ಪೌರಾಣಿ ಚರಿತೆ ಗಳು), ಕೀರ್ತನೆಗಳು, ಸುಳಾದಿ, ಉಗಾಭೋಗ, ಆರತಿ ಹಾಡುಗಳು ಮುಂತಾ ದವು ಅವಳ ಸಹಜ ಪ್ರತಿಬೆಗೆ ಕೈಗನ್ನಡಿಯಾಗಿವೆ ದೀರ್ಘವಾದ ಹಾಡುಗಳ ಪೈಕಿ ಸುಭದ್ರಾ ಕಲ್ಯಾಣ, ನಳಚರಿತ್ರೆ, ಮುಯ್ಯದ ಹಾಡು, ರತಿ ಕಲ್ಯಾಣ ಸುಧಾ ಮನ ಹಾಡು, ಶಕುಂತಲಾ ಚರಿತ್ರೆ, ಕೃಷ್ಣದಾನವೃತ ಮುಂತಾದವು ತಮ್ಮದೇ ಆದ ವಿಶಿಷ್ಟವಾದ ಸ್ಥಾನವನ್ನು ಪಡೆದುಕೊಂಡಿವೆ ಭಕ್ತಿಯ ರಭಸದಲ್ಲಿ ರಚಿತ

ವಾಗಿರುವ ಆ ಹಾಡುಗಳು ಒಂದೊಂದೂ ಒಂದು ಪುಸ್ತಕವಾಗುವಷ್ಟು ದೊಡ್ಡ ದಾಗಿವೆ ಭೀಮವ್ವ ಅವುಗಳಲ್ಲಿ ಪದ್ಯ ಮತ್ತು ಗದ್ಯ ಶೈಲಿಗಳೆರಡನ್ನೂ ಹದವಾಗಿ ಬಳಸಿಕೊಂಡಿದ್ದಾಳೆ ಹೆಚ್ಚು ಶ್ರಮಪಡದೆ ಪದಗಳಿಗಾಗಿ ತಿಣುಕದೆ ಆಕೆ ನಿರರ್ಗಳ ವಾಗಿ, ಸುಲಲಿತವಾಗಿ ಹಾಡಿದ್ದಾಳೆ ರಸಭಂಗವಾಗದಂತೆ, ಭಾವನೆಗಳನ್ನು ಸರಳ ವಾದ ಭಾಷೆಯ ಮೂಲಕ ಅಭಿವ್ಯಕ್ತಗೊಳಿಸುವ ಚಮತ್ಕಾರವನ್ನು ಭೀಮವ್ವ ಮೈಗೂಡಿಸಿಕೊಂಡಿದ್ದಾಳೆ ಕೃತಿಗಳು ಉದ್ದವೆನಿಸಿದರೂ ಬೇಸರ ತರುವುದಿಲ್ಲ ಓದಿಸಿಕೊಂಡು ಹೋಗುತ್ತವೆ ತಿಳಿನೀರಿನಿಂದ ಹರಿಯುವ ವಿಶಾಲ ನದಿಯಂತೆ ಮನಸ್ಸಿಗೆ ಆಹ್ಲಾದಕರವಾದ ಅನುಭವವನ್ನು ತಂದುಕೊಡುತ್ತವೆ ಕಣ್ಣಿನ ಮುಂದೆಯೇ ನಡೆಯುತ್ತಿರುವಂತೆ ಭಾಸವಾಗಿ ಅದರಲ್ಲಿನ ಪಾತ್ರಗಳು ಜೀವಂತ ವೆನಿಸುತ್ತವೆ

ತನ್ನ ಆರಾಧ್ಯ ದೈವವಾದ ಭೀಮೇಶಕೃಷ್ಣ ನನ್ನು ಹಾಡಿ ಕೊಂಡಾಡು ವುದರಲ್ಲಿ ಭೀಮವ್ವನಿಗೆ ಎಲ್ಲಿಲ್ಲದ ಉತ್ಸಾಹ ತಾನು ಸೃಷ್ಟಿಸುವ ಪಾತ್ರಗಳ ಮೂಲಕ ಶ್ರೀಹರಿಯನ್ನು ಸ್ತೋತ್ರಮಾಡುವ ಅವಳ ಪರಿಯೇ ಒಂದು ಸೊಗಸು

ಮಾಧವ ಮಧುಸೂದನ ಹರಿ
ಯಾದವೇಶನೇ ರಾಧಾವಲ್ಲಭ

ಆದಿಮೂರುತಿ ಅನಲಾಂತರ್ಗತ
ನೀ ದಯಾಂಬುಧಿ ನಿಂದು ರಕ್ಷಿಸೋ

ಯದುಕುಲೇಶನೆ ವಿಶ್ವಗುಪ್ತನೆ
ಹೃದಯವಾಸನೆ ರುಕ್ಮಿಣೀ ಪತಿ

ಪದುಮನಾಭನೆ ಪರಮ ಆಪ್ತನೆ ಜ–
ಗದೊಳ್ವ್ಯಾಪ್ತನೆ ನೀ ನಿರ್ಲಿಪ್ತನೆ

ಜಗದೊಳೋರ್ವನೆ ಜನದೊಳಾರ್ಯನೆ
ಸುಗುಣ ಶೂರನೆ ಸುಂದರ ಗಂಭೀರನೆ

ಅಚ್ಯುತನೆ ಶ್ರೀವತ್ಸಧಾರಿ ಎ-
ನಿಚ್ಛೆ ಪೂರ್ಣಮಾಡಿಂದಿರಾಪತಿ

ಭೃತ್ಯ ವತ್ಸಲ ಬಿರುದು ನಿನ್ನದು
ಸತ್ಯಭಾಮೇರ ಕಾಂತ ಕರುಣಿಸೋ

ಕಂತುಪಿತನೆ ಎನ್ನಂತರಂಗದ
ಪಂಥ ಗೆಲಿಸೋ ಪರಮಪುರುಷನೆ

ಶೇಷಶಯನ ಶ್ರೀನಾಥ ಪ್ರಭುವೆ ಎ-
ನ್ನಾಸೆ ಗೆಲಿಸೋ ಭೀಮೇಶಕೃಷ್ಣನೇ"

ಹೀಗೆ ತೈಲಧಾರೆಯಂತೆ ನಿರಂತರವಾಗಿ ಚಿಮ್ಮುವ ಪರಿಶುದ್ಧ ಕೃಷ್ಣ ಭಕ್ತಿಯೇ ಭೀಮವ್ವನ ಕೃತಿಗಳ ಜೀವಾಳ

## ಕೃತಿಗಳ ಒಳನೋಟ

ಸುಭದ್ರಾ ಕಲ್ಯಾಣದಲ್ಲಿ ಶ್ರೀಕೃಷ್ಣನ ತಂಗಿಯಾದ ಸುಭದ್ರೆ ಮತ್ತು ಅರ್ಜುನನ ವಿವಾಹವೇ ಕಥಾವಸ್ತು ಕೃಷ್ಣನಿಗೆ ಸುಭದ್ರೆಯನ್ನು ತನ್ನ ಪ್ರಿಯ ಸಖನಾದ ಅರ್ಜುನನಿಗೆ ಧಾರೆಯೆರೆದು ಕೊಡುವ ಆಸೆ ಆದರೆ ಅಣ್ಣನಾದ ಬಲರಾಮನಿಗೆ ಇದು ಇಷ್ಟವಿಲ್ಲ ಸುಭದ್ರೆಯನ್ನು ಕೌರವಧಿಪತಿಯಾದ ದುರ್ಯೋಧನನಿಗೆ ಕೊಡಬೇಕೆಂಬುದು ಅವನ ಬಯಕೆ ಸುಭದ್ರೆಗೆ ಮಾತ್ರ ಅರ್ಜುನನ ಮೇಲೇ ಮನಸ್ಸು ತಂಗಿಯ ಮನದಿಂಗಿತವನ್ನು ತಿಳಿದ ಕೃಷ್ಣ ಒಂದು ಉಪಾಯ ಹುಡುಕುತ್ತಾನೆ ಆದರಂತೆ ಅರ್ಜುನ ಸನ್ಯಾಸಿಯ ವೇಷದಲ್ಲಿ ಬಲರಾಮನ ಬಳಿಗೆ ಬರುತ್ತಾನೆ ಬಲರಾಮನಿಗೆ ಸನ್ಯಾಸಿ ಸಂತರೆಂದರೆ ಬಹಳ ಗೌರವ ಅವನು ಆ ಸನ್ಯಾಸಿಯನ್ನು ತುಂಬಾ ಆದರದಿಂದ ಬರಮಾಡಿಕೊಳ್ಳು ತ್ತಾನೆ ಇಲ್ಲೇ ಕೆಲವು ದಿನಗಳಿದ್ದು ನಮ್ಮ ರಾಜ್ಯವನ್ನು ಪುನೀತಮಾಡಬೇಕೆಂದು ಬೇಡಿಕೊಳ್ಳುತ್ತಾನೆ ತನ್ನ ಅರಮನೆಯಲ್ಲೇ ಎಲ್ಲಾ ವಿಧವಾದ ಸೌಕರ್ಯಗಳನ್ನೂ ಒದಗಿಸಿ ತಂಗಿಯಾದ ಸುಭದ್ರೆಯನ್ನೇ ಆ ಸನ್ಯಾಸಿ ಮಹಾಶಯರ ಸೇವೆಗೆ ನೇಮಿ ಸುತ್ತಾನೆ ಇದನ್ನು ಕಂಡು ಕೃಷ್ಣನಿಗೆ ವ್ಯಾಕುಲವಾಗುತ್ತದೆ

ಬ್ಯಾಡವೋ ಅಣ್ಣಯ್ಯ ಬ್ಯಾಡಬ್ಯಾಡವೋ
ಬ್ಯಾಡಬ್ಯಾಡಣ್ಣಯ್ಯ ಬೇಡಿಕೊಂಡ್ಹೇಳುವೆ
ನಾಡೊಳಗಿದು ಹಾಸ್ಯ ಗಾಡಿಕಾರ ತಿಯೀತ"

ಎಂದು ಹೇಳಿ ದೊರೆಮಕ್ಕಳಂತೆ ತೋರುವ" ಅವನನ್ನು ಅರಮನೆಗೆ ಸೇರಿಸದಂತೆ ಎಚ್ಚರಿಕೆ ಕೊಡುತ್ತಾನೆ ಸದನಕ್ಕೆ ಕರೆದೊಯ್ಯದರೆ ಕದನಕ್ಕೆ ಕಾರಣವಾಗಬಹುದು ಅದೂ ಅಲ್ಲದೆ ಆತ

'ಪಾಶಗಾರನಾಗಿ ತೋರುವನು, ಹೆಣ್ಣ
ನಾಸೆಯಿಂದಲಿ ಬಂದಿಹನು ಚಲ್ವ
ಮೀಸೆ ಪ್ರಾಯದಿ ಮೋಹಿಸುವನು"
ಎನ್ನುತ್ತಾನೆ

ಬಲರಾಮನಿಗೆ ತಮ್ಮನ ಮಾತಿನಲ್ಲಿ ನಂಬಿಕೆಯಿಲ್ಲ ತೇಜಸ್ವಿಗಳೂ, ಸಾತ್ವಿಕರೂ ಆಗಿರುವ ಯುವಸನ್ಯಾಸಿಗಳು ಅನಾಯಾಸವಾಗಿ ಮನೆಗೆ ಬಂದಿರುವಾಗ ಕೃಷ್ಣನ ಕುಚೋದ್ಯ ಅವನಿಗೆ ಹಿಡಿಸುವುದಿಲ್ಲ

ಸಿಂಹಕ್ಕೆ ನರಿಯೆಂದಾಡುವರೆ । ಹಡೆದವ್ವ
ಗೆಲ್ಲಾದರೂ ದಾಸಿ ಎಂಬುವರೆ ?
ಅನ್ಯಾಯ ಮಾತನಾಡುವರೆ । ಇಂಥ
ಸನ್ಯಾಸಿಗಳಿಗೆ ಹೆಣ್ಣಿನಾಶೆಯೆಂಬುವರೇ ?
ಬೆಣ್ಣೆಗಳ್ಳನೆ ಅಪಹಾಸ್ಯ ಮಾಡುವರೇ ?
ಉಡುವ ಸೀರೆಗಳನ್ನು ಕದ್ದಿ । ನೀ ಕಡ
ಆಲದ ಮರವನೇರಿದ್ದು ಪ್ರಸಿದ್ಧಿ ।
ಮಡದಿಯರ ಕೂಡ ಕುಚೋದ್ಯ ।
ಇನ್ನೂ ಬಿಡಲೊಲ್ಲಿ ಭೀಮೇಶಕೃಷ್ಣ
ನಿನ್ನ ಬುದ್ಧಿ ।"

ಎಂದು ತಮ್ಮನ ಮೇಲೆ ಕೋಪಿಸಿಕೊಳ್ಳುತ್ತಾನೆ

ಅಕ್ರೂರವರದನ ಧಿಕ್ಕಾರ ಮಾಡಿ ಪಲ್ಲಕ್ಕಿಯೊಳಗೆ ಅತಿಶ್ರೇಷ್ಠರ ಕರೆದುತಂದ' ಬಲರಾಮನಿಗೆ ಕೃಷ್ಣನ ಮಾತುಗಳು ಅರಿವಿಗೆ ಬಂದಿದ್ದು ಆ ಸನ್ಯಾಸಿ ಸುಭದ್ರೆಯನ್ನು ಹಾರಿಸಿಕೊಂಡು ಹೋದಮೇಲೆ ಆಗ ಅವನು ಕೈಕೈ ಹಿಸುಕಿಕೊಂಡು ಪೇಚಾಡುತ್ತಾನೆ

ಕೃಷ್ಣ ಮಾತ್ರ ಈ ಪ್ರಕರಣದಲ್ಲಿ ತನ್ನ ಪಾತ್ರವೇನೂ ಇಲ್ಲವೆಂಬಂತೆ
ಎಷ್ಟು ಹೇಳಿದರೆನ್ನ ಮಾತು ನಿಷ್ಠುರವಾಯ್ತು
ಕಟ್ಟಕಡೆಗೆ ಎನ್ನ ಮಾತು ಅಷ್ಟೂ ನಿಜವಾಯ್ತು
ಎನ್ನುತ್ತಾನೆ

ಈ ಕೃತಿಯಲ್ಲಿ ಭೀಮವ್ವ ತೋರಿರುವ ನಿರೂಪಣಾ ಕೌಶಲ್ಯ ಮನಸೆಳೆಯು ವಂತಹುದು ಪ್ರಧಾನವಾದ ಕೃಷ್ಣಭಕ್ತಿಗೆ ಕುಂದುಬರದಂತೆ ಅವಳು ಹಾಸ್ಯರಸ ಮತ್ತು ಶೃಂಗಾರರಸಗಳನ್ನು ಇಲ್ಲಿ ಯಶಸ್ವಿಯಾಗಿ ಪ್ರಯೋಗಿಸಿದ್ದಾಳೆ

**ಮೋಹಕ ಕಾವ್ಯಶಕ್ತಿ**

ಸುಧಾಮನ ಚರಿತೆಯೂ ಸಹ ವಿಶಿಷ್ಟವಾದ ಶೈಲಿಯಲ್ಲಿ ರಚಿತವಾಗಿದೆ ಪ್ರಾಸಬದ್ಧವಾಗಿ, ದ್ವಿಪದಿಯಲ್ಲಿ ಸರಸವಾಗಿ ಓದಿಸಿಕೊಳ್ಳುವ ಇದರಲ್ಲಿ ಮಿಂಚುವ ಕಾವ್ಯಶಕ್ತಿ ಮೋಹಕವಾದದ್ದು ಬಾಷೆಯ ಮೇಲೆ ಭೀಮವ್ವನಿಗಿರುವ ಅಸಾ ಮಾನ್ಯ ಪ್ರಭುತ್ವ ವಿಸ್ಮಯ ಕವಿಸಿಬಿಡುತ್ತದೆ

ಶ್ರೀಕೃಷ್ಣ ಮತ್ತು ಅವನ ಬಾಲ್ಯಸ್ನೇಹಿತರಾದ ಸುಧಾಮನ ಮಧುರ ಸ್ನೇಹದ ಸುತ್ತ ಈ ಕೃತಿ ಹೆಣೆಯಲ್ಪಟ್ಟಿದೆ ಸುಧಾಮ ಕಡುಬಡವ ಜೊತೆಗೆ ಅವನಿಗೆ ಮನೆ ತುಂಬಾ ಮಕ್ಕಳು ಸಂಸಾರವನ್ನು ಸರಿಯಾಗಿ ತೂಗಿಸುವುದೇ ಕಷ್ಟ ಆದರೆ ಸುಧಾಮ ಮಹಾ ಸ್ವಾಭಿಮಾನಿ ಸ್ನಾನ ಹೋಮ ಜಪವ ಮಾಡಿ ನೇಮ ನಿಷ್ಠೆಯಿಂದ ಉಪ್ಪು, ದಾನವನ್ನು ಬೇಡಿ ಕಾಲ ಕಳೆಯುತ್ತಿದ್ದ ಆದ ಕಡೆಗೆ ಹೆಂಡತಿಯ ಮಾತಿಗೆ ಕಟ್ಟುಬಿದ್ದು ತನ್ನ ಬಾಲ್ಯಸ್ನೇಹಿತ ಮತ್ತು ದ್ವಾರಕಾಧೀಶ ನಾದ ಶ್ರೀಕೃಷ್ಣನ ಬಳಿಗೆ ಸಹಾಯ ಯಾಚಿಸಲು ಬರುತ್ತಾನೆ

ಸುಧಾಮ ಶ್ರೀಕೃಷ್ಣನನ್ನು ಕಾಣಲು ದ್ವಾರಕಾಪುರಕ್ಕೆ ಬರುವ ಪರಿಯನ್ನು ಭೀಮವ್ವ ಮನಮುಟ್ಟುವ ಶೈಲಿಯಲ್ಲಿ ಚಿತ್ರಿಸುತ್ತಾಳೆ

"ಹುಟ್ಟ ಮೊದಲೆ ಅನ್ನ ತನ್ನ ಹೊಟ್ಟೆಗುಂಡ ಮನುಜನಲ್ಲ
ಗಟ್ಟಿ ಗಾಳಿ ಬರಲೀಗ್ಹಾರುವಂತೆ ತೋರುವ ।

ಅಸ್ತಿ ಚರ್ಮ ಆತನಂಗಕ್ಹತ್ತಿಕೊಂಡ ಹೊಟ್ಟೆಬೆನ್ನು
ಮತ್ತೆ ನಡೆಯಲಾರ ಮಾತನಾಡಲಾರನು ।

ದೊಡ್ಡನಾಮ ಹಚ್ಚಿಕೊಂಡು ಮುದ್ರೆಮುಯ್ಕಲೊತ್ತಿಕೊಂಡು
ಶುದ್ಧ ಚಂದ್ರಮನ ಕಾಂತಿ ತೋರುತ್ತಿದ್ದನು ।

ಛಿದ್ರವಾದ ಬಟ್ಟೆಯುಟ್ಟು ಚಿಗುರು ತುಳಸಿ ಕಿವಿಯಲ್ಲಿಟ್ಟು
ಪದ್ಮನಾಭ ಪಾಲಿಸೆನುತ ಕೂಗುತ್ತಿದ್ದನು ।

ಪ್ರಿಯ ಸ್ನೇಹಿತನಾದ ಸುಧಾಮನನ್ನು ನೋಡಿದ ಕೂಡಲೆ ಶ್ರೀಕೃಷ್ಣನಿಗೆ ಆನಂದದ ತರಂಗಗಳು ಉಕ್ಕೇರುತ್ತವೆ ಅವನು ಸುಧಾಮನನ್ನು ತುಂಬಿದ ಹೃದಯದಿಂದ "ಕರೆಸಿ ಕರವ ಪಿಡಿದು ಕುಳ್ಳಿರಿಸಿ ದಿವ್ಯಾಸನದ ಮೇಲೆ, ತರಿಸಿ ಚಾಮರದ ಗಾಳಿ" ಹಾಕುತ್ತಾ ಪನ್ನೀರು ತಂದು ಪಾದ ತೊಳೆದು ದ್ರಾಕ್ಷಿ ಕಿತ್ತಳೆಹಣ್ಣು ಎಳನೀರು ತಂದು" ಆದರೋಪಚಾರ ಮಾಡುತ್ತಾನೆ ಪದುಮನಾಭ ಹರುಷದಿಂದ ಮುದದಿ ಮಾತನಾಡಿದನು । ಮದುವೆಯಾಯಿತೇನೋ ಸಖನೆ ಎಂದು ಕೇಳಿದ " ನಂತರ ಕೃಷ್ಣ "ಅಣ್ಣ ನಮ್ಮತ್ತಿಗೆ ನಮಗೇನು ಕಳಿಸಿದಳು । ನಿನ್ನ ಹೆಗಲಗಂಟು ಬಿಚ್ಚಿ ತೋರಿಸು" ಎಂದು ಪ್ರಶ್ನಿಸಿ ಸುಧಾಮ ತಂದ ಅವಲಕ್ಕಿಯನ್ನು ಪ್ರೀತಿಯಿಂದ ಸ್ವೀಕರಿಸಿ, ಅದನ್ನು ಅಕ್ಷಯವನ್ನಾಗಿ ಮಾಡಿ ತನ್ನ ಎಲ್ಲಾ ಮಹಿಷಿಯರಿಗೂ ಹಂಚುತ್ತಾನೆ ಬಾಲ್ಯದಲ್ಲಿ ನಡೆದ ಗುರುಕುಲವಾಸದ ಘಟನೆಗಳನ್ನೆಲ್ಲಾ ತುಂಬಾ ಸಲಿಗೆಯಿಂದ ಮಿತ್ರನೊಂದಿಗೆ ಮೆಲುಕು ಹಾಕುತ್ತಾನೆ

ಆದರೆ ಸುಧಾಮನಿಗೆ ಮಾತ್ರ ಇದನ್ನೆಲ್ಲಾ ಕಂಡು ತುಂಬಾ ಸಂಕೋಚವಾಗುತ್ತದೆ ತನ್ನ ಬಡತನವನ್ನು ಹೇಳಿಕೊಂಡು ಕೃಷ್ಣನಿಂದ ಸಹಾಯ ಪಡೆ

ಯುವ ಮನಸ್ಸೇ ಅವನಿಗೆ ಬರಲಿಲ್ಲ ಅಷ್ಟು ದೊಡ್ಡ ದ್ವಾರಕಾಧೀಶನೆದುರಿಗೆ ಬಾಲ್ಯದ ಗೆಳೆತನವನ್ನು ದುರುಪಯೋಗಪಡಿಸಿಕೊಂಡು ನನ್ನ ಸಂಸಾರಕ್ಕೆ ಸಹಾಯ ಮಾಡು" ಎಂದು ಕೇಳಿಕೊಳ್ಳುವುದು ಅವನಿಗೆ ಸರಿಯೆನ್ನಿಸಲಿಲ್ಲ

ಸುಧಾಮ ಏನನ್ನೂ ಕೇಳಿಕೊಳ್ಳದೆ ಹಾಗೇ ಮನೆಗೆ ಹಿಂದಿರುಗುತ್ತಾನೆ ಮರಳಿ ಊರಿಗೆ ಬಂದು ತನ್ನ ಮನೆಯ ಸಮೀಪ ನಿಂತು ನೋಡುತ್ತಾನೆ ಅವನಿಗಾಗುವ ಆಶ್ಚರ್ಯ ಅಷ್ಟಿಷ್ಟಲ್ಲ ಸುತ್ತಮುತ್ತಲೂ ಅಷ್ಟಐಶ್ವರ್ಯಗಳು ತುಂಬಿವೆ ತನ್ನ ಮುರುಕಲು ಮನೆಯ ಜಾಗದಲ್ಲಿ ಬಂಗಾರದ ಬಂಗಲೆಯಿದೆ ! ಸುಧಾಮ ಒಳ್ಳೆ ಹುರುಪಿನಿಂದ ಮನೆಯೊಳಕ್ಕೆ ನುಗ್ಗುತ್ತಾನೆ ಆದರೆ ಬಾಗಿಲಲ್ಲಿ ನಿಂತಿದ್ದ ಕಾವಲುಗಾರರು ಆ ಬಡ ಬ್ರಾಹ್ಮಣನನ್ನು ತಡೆಯುತ್ತಾರೆ ಆಗ ಸುಧಾಮನಿಗೆ ತನ್ನ ಮೇಲೆಯೇ ಜಿಗುಪ್ಸೆ ಹುಟ್ಟುತ್ತದೆ "ಎತ್ತಹೋದರೆನ್ನ ಪ್ರಾರಬ್ದ ಬೇರೆ ಆಗುವುದೆ । ಸತ್ಯವಾದ ಬ್ರಹ್ಮಬರಹ ತಪ್ಪದೆಂದು ಪೇಚಾಡಿಕೊಳ್ಳುತ್ತಾನೆ ಜೊತೆಗೆ ಕೃಷ್ಣನ ಮೇಲೆ ಅಸಾಧ್ಯ ಕೋಪವೂ ಬರುತ್ತದೆ ನನ್ನಂಥಹ ಬಡಬ್ರಾಹ್ಮಣನನ್ನು ಹೀಗೆ ಬಳಲಿಸುವುದು ನಿನಗೆ ಭೂಷಣವೇ ಕೃಷ್ಣ ಎಂದು ಹೇಳಿಕೊಳ್ಳುತ್ತಾ ಅವನ ಮೇಲೆ ನಿಂದಾಸ್ತುತಿಯನ್ನು ಪ್ರಯೋಗಿಸುತ್ತಾನೆ

ಭಾಳ ಎಡವನೆಂದುಯೆನ್ನ ಕೀಳು ಮಾಡಿದ್ಯಾಕೋ ಸ್ವಾಮಿ  
ಕೇಳಿ ಬಲ್ಲೆ ನಿನ್ನ ಸಂಸಾರ ಸುಖವನು ।

ನೀರೊಳಗೆ ಮೀನಾಗ್ಯೊಳತು ನಾರುತ್ತಿದ್ದ ಬೆಟ್ಟದ  
ಹೇರ ಭಾರಕ್ಕಂಜಿ ಮೋರೆ ಕೆಳಗೆ ಮಾಡಿದ್ಯೋ ।

ಬೇರ ತಿಂದು ಗುಡ್ಡ ಗಂಹರ ತಿರುಗಿ ಕಂಬದೊಳಗೆ  
ಸೇರಿ ಕರುಳ ಹಾರಕ್ಯಾಗಿ ತೆರೆದು ಬಾಯನು ।

ನೀನು ನನ್ನಂಥ ಬಡವನಾಗಿ ಬೇಡಿಕೊಂಡು ಭೂಮಿ-  
ದಾನ ಬೇಡಿ ಕಾಲ ಕಳೆಯಲಿಲ್ಲವೆ ।

ನಾರನುಟ್ಟು ನಾರಿಬಿಟ್ಟು ಘೋರ ಅರಣ್ಯ ತಿರುಗಿ  
ಚೋರತನವ ಮಾಡಿ ಬೈಸಿಕೊಳ್ಳಲಿಲ್ಲವೆ ।

ಬತ್ತಲಿದ್ದು ಬಿಳಿಯ ಕೋರಿ ಕಾಣದಂತೆ ನೀನು ಬಿಚ್ಚು
ಕತ್ತಿ ಹಿಡಿದು ಕಲಿಗಳ್ಳಿಂದೆ ತಿರುಗಿದ್ಯಾತಕೇ ।

ಎಂದು ಮುಂತಾಗಿ ಹಂಗಿಸುತ್ತಾ ದಶಾವತಾರದ ವರ್ಣನೆ ಮಾಡುತ್ತಾನೆ

ಬಾರ್ಯರ್ಳಿದ್ದು ಬಸಿರು ಬಾಣಂತಿ ಖರ್ಚಗಿಲ್ಲವೆಂದು ನಾಭಿಯಿಂದ ಪಡೆದ್ಯೋ ನಾಲ್ಕು ಮೋರೆ ಶಿಶುವನು ಎಂದು ಹಾಸ್ಯ ಮಾಡುತ್ತಾನೆ ಕಡೆಗೆ ಸುಧಾಮನ ಮೇಲೆ ಶ್ರೀಕೃಷ್ಣನ ಅನುಗ್ರಹವಾಗುತ್ತದೆ ಹೆಂಡತಿ ಮಕ್ಕಳು ಓಡೋಡಿ ಬಂದು ಅವನನ್ನು ಆದರದಿಂದ ಸ್ವಾಗತಿಸುತ್ತಾರೆ

ಇಲ್ಲಿ ಸುಧಾಮನ ಮೂಲಕ ತನ್ನ ನಿಷ್ಕಲ್ಮಶವಾದ ಸದೃಢ ಕೃಷ್ಣಭಕ್ತಿಯನ್ನು ಭೀಮವ್ವ ಧಾರೆ ಧಾರೆಯಾಗಿ ಹರಿಸಿದ್ದಾಳೆ ಸಿಕ್ಕಿದ ಅವಕಾಶಗಳನ್ನು ಸೂಕ್ತವಾಗಿ ಬಳಸಿಕೊಂಡು ಶಾಸ್ತ್ರಾರ್ಥಕ್ಕೆ ವಿರುದ್ಧವಾಗದ ಹಾಗೆ ಶ್ರೀಕೃಷ್ಣನ ಲೀಲೆಗಳನ್ನು ವರ್ಣನೆ ಮಾಡುವುದು ಭೀಮವ್ವನಿಗೆ ಸಿದ್ಧಿಸಿದ ಕಲೆ ಸರಸವಾಗಿ ಸಾಗಿರುವ ನಿಂದ್ಯಾಸ್ತುತಿಗಳೂ ಸಹ ತಿರಸ್ಕಾರಕ್ಕೆ ತಿರುಗದೆ ಆಳವಾದ ಭಕ್ತಿಗೆ ದಾರಿಮಾಡಿಕೊಡುತ್ತವೆ

**ವರ್ಣನಾ ಕೌಶಲ್ಯ**

ಅರವತ್ತೊಂದು ಧ್ವನಿಗಳುಳ್ಳ 'ರತಿ ಕಲ್ಯಾಣ'ದ ಹಾಡು ಭೀಮವ್ವನ ವರ್ಣನಾ ಕೌಶಲ್ಯಕ್ಕೆ ಕೈಗನ್ನಡಿಯಾಗಿದೆ ಭೀಮೇಶ ಕೃಷ್ಣನನುಜೆ ಕೃಷ್ಣೆ' ಯಾದ ದ್ರೌಪದಿಗೆ ಈ ಕಾವ್ಯದಲ್ಲಿ ಪ್ರಮುಖ ಸ್ಥಾನವನ್ನು ನೀಡಿ ಅವಳ ಶೌರ್ಯ–ಸಾಹಸಗಳನ್ನು ಭೀಮವ್ವ ಕೊಂಡಾಡಿದ್ದಾಳೆ

ರತಿ–ಮನ್ಮಥರ ಮದುವೆಗೆ ವಿಘ್ನವನ್ನುಂಟುಮಾಡುವ ಕೌಂಡ್ರಿಕನನ್ನು ನಿವಾರಿಸಲು ಪುರುಷರೆಲ್ಲರೂ ವಿಫಲರಾದಾಗ ದ್ರೌಪದಿ ಕನಲಿ ಕೆಂಡವಾಗಿ ಅವನನ್ನು ಹತ್ತಿಕ್ಕಲು ತಾನೇ ಹೊರಡುತ್ತಾಳೆ

"ಪುಂಡ ಕೌಂಡ್ರಿಕ ನಿನ್ನುದರ ಬಗೆದೋಕುಳಿ
ಕೊಂಡವನು ಮಾಡಿ ರಕ್ತವ ಸೂರೆಮಾಡುತಲಿ ಪ್ರ–
ಚಂಡ ನಿನ್ನ ಶಿರವ ನಾ ಚೆಂಡಾಡುವೆ

ಎಂದು ಭೀಮಪತ್ನಿ ದ್ರೌಪದಿ ಘೋರರೂಪ ತಳೆದು, ಗಗನದೆತ್ತರ ಬೆಳೆದು ಗರ್ಜಿಸುತ್ತಾಳೆ

ಬಡಬಡನ್ನಲ್ಲ ಕಡಿಯುತಲಿ
ಘುಡಿಘುಡಿಸುತ ಘನ ಘೋಷದಲಿ
ಘುಡಘುಡನ್ನಲ್ಲ ಮುರಿಯುತಲಿ ಥಡ
ಥಡ ರಥದಿಂದ ಕೆಡೆಯುತಲಿ ಬಡಬಡನೆ
ಸಿಡಿಲಂತೆ ಗರ್ಜಿಸಿ ಒಡಲು ಬಗೆದು ಕಿತ್ತು ಕರುಳ
ಹಿಡಿದು ಸೂರ್ಯಾಡುತಲಿ ರಕ್ತವ ಅಡವಿಯಲ್ಲಾರ್ಭಟ ಮಾಡುತ

ವೀರವನಿತೆ ದ್ರೌಪದಿ ವಿಜೃಂಭಿಸುತ್ತಾಳೆ ಕೌಂಡ್ರಿಕನನ್ನು ಮೆಟ್ಟಿ ರತಿ–ಮನ್ಮಥರ ಕಲ್ಯಾಣಕ್ಕೆ ಅನುವು ಮಾಡಿಕೊಡುತ್ತಾಳೆ ಪವನನ್ನಲ್ಲಭೆಂು ಶೌರ್ಯವನ್ನು ನೋಡಿ ಅಮರಾದಿ ಸುರರೆಲ್ಲ ಅರಳು ಪುಷ್ಪಗಳ ಮಳೆ ಕರೆಯುತ್ತಾರೆ ದೇವಲೋಕದ ದುಂದುಮ್ಮಿ, ಭೇರಿಗಳು ದಂಧಣವೆಂದು ಮೊಳಗುತ್ತಿರಲು ಬ್ರಹ್ಮಭವರು ದ್ರೌಪದಿಗೆ 'ಜಯಜಯಾ' ಎಂದು ಜೈಕಾರ ಹಾಕುತ್ತಾರೆ

ಅತಿಭಕ್ತಿಯಿಂದ ದ್ರೌಪದಿಯು ಮನ್ಮಥಗೆ ತಾ
ರತಿ ತಂದು ಲಗ್ನಮಾಡಿದ ಕಥೆಯು ಕಲ್ಯಾಣ
ಹಿತದಿಂದ ಹೇಳಿ ಕೇಳಿದ ಜನರಿಗೆಲ್ಲ ಶ್ರೀ–
ಪತಿ ಒಲಿದುಕೊಡುವ ಕಾಮಿತ ಫಲವ ಕರುಣದಿಂದ

ಎಂದು ಫಲಸ್ತುತಿಯನ್ನು ಹೇಳಿ ಭೀಮವ್ವ ಕಡೆಗೆ ಮಂಗಳ ಹಾಡಿದ್ದಾಳೆ ಈ ಕಾವ್ಯದಲ್ಲಿ ಭೀಮವ್ವನ ಅದ್ಭುತ ಕಲ್ಪನಾಶಕ್ತಿ ಮತ್ತು ಸಹಜ ಕಾವ್ಯಶಕ್ತಿಗಳ ಮಧುರ ಮಿಲನವಾಗಿ ಸಾಗಿಬಂದ ಸಾಗರಕ್ಕೆ ಬಂದು ನದಿ ಕೂಡಿದ್ದಾಗೆ ವಿಹಂಗಮ ದೃಶ್ಯವನ್ನು ಒದಗಿಸಿಕೊಡುತ್ತದೆ

ಹೀಗೆ ಭೀಮವ್ವ ರಚಿಸಿರುವ ದೀರ್ಘವಾದ ಹಾಡುಗಳು ಮನಸ್ಸನ್ನು ಮುಟ್ಟುತ್ತಾ ಸುಂದರವಾದ ಕಲ್ಪನೆಗಳನ್ನು ಒದಗಿಸುತ್ತಾ ಹೋಗಿವೆ ಅವಳ ಮುಯ್ಯಾದ ಹಾಡಿ ನಲ್ಲಿ ಶ್ರೀಕೃಷ್ಣನ ಲೀಲಾ ಮಹಿಮೆಗಳ ವರ್ಣನೆಯಿದ್ದರೆ 'ನಳ ಚರಿತ್ರೆ'ಯಲ್ಲಿ ನಳ ಮತ್ತು ದಮಯಂತಿಯರ ಸಮಾಗಮದ ಚಿತ್ರಣವಿದೆ

ಭೀಮೇಶಕೃಷ್ಣನ ಕೃಪೆಯಿಂದ ನಳನ ಕಷ್ಟ ಪರಂಪರೆಗಳು ದೂರವಾದುದರ ಬಣ್ಣನೆಯಿದೆ "ಶಕುಂತಲಾ ಚರಿತ್ರೆ"ಯಲ್ಲಿ ಶಕುಂತಲೆ ಮತ್ತು ದುಶ್ಯಂತರ ವಿವಾಹ, ವಿಯೋಗ ಮತ್ತು ಸಮಾಗಮದ ವರ್ಣನೆಯಿದೆ "ಕೃಷ್ಣದಾನವ್ರತ" ದಲ್ಲಿ ತುಳಸಿಯ ಮಹಿಮೆ, ರುಕ್ಮಿಣಿಯ ಪತಿಪ್ರೇಮ, ಸತ್ಯಭಾಮೆಯ ಸವತಿ ಮಾತ್ಸರ್ಯ, ನಾರದರ ಕಲಹ ಕೌಶಲ್ಯ ಮತ್ತು ಶ್ರೀಕೃಷ್ಣನ ಅಪೂರ್ವ ಗುಣ ಗಳು ಚೆನ್ನಾಗಿ ವ್ಯಕ್ತವಾಗಿವೆ

ಇಂತಹ ದೀರ್ಘವಾದ ಕೃತಿಗಳನ್ನು ರಚಿಸಿ ಭಕ್ತಿಯ ಸೆಲೆಯನ್ನೇ ಚಿಮ್ಮಿ ಸಿರುವ ಭೀಮವ್ವ ತನ್ನ ಸ್ವಂತ ಬುದ್ಧಿಯಿಂದ ಹಾಡುಗಳನ್ನು ಹಾಡಿಲ್ಲವಂತೆ ನುಡಿಸುವವನು ನಾರಾಯಣನು ನಾನು ಕೇವಲ ನಾಲಿಗೆಯಿಂದ ನುಡಿಯುವವಳು ಮಾತ್ರ ಎಂದು ಅವಳು ತನ್ನ ಶಕುಂತಲಾ ಚರಿತ್ರೆಯ ಪ್ರಾರಂಭದಲ್ಲಿ ಹೇಳಿ ಕೊಂಡಿದ್ದಾಳೆ



## ಭೀಮೇಶ ಕೃಷ್ಣಾಂಕಿತ ಕೀರ್ತನೆಗಳು

ಕೆಲವು ದೀರ್ಘವಾದ ಹಾಡುಗಳನ್ನು ಬಿಟ್ಟರೆ ಭೀಮವ್ವನ ಉಳಿದ ಕೃತಿಗಳೆಲ್ಲವೂ ಕೀರ್ತನ ರೂಪದಲ್ಲಿಯೇ ಇವೆ ನೋಡುವುದಕ್ಕೆ ಸಣ್ಣ ಹಾಡುಗಳಂತೆ ಕಿರಿದಾಗಿ ತೋರಿದರೂ ಅರ್ಥವಂತಿಕೆಯಲ್ಲಿ ಅವು ಹಿರಿದಾಗಿವೆ ಭೀಮವ್ವನ ಕೀರ್ತನೆಗಳಲ್ಲಿ ಕಂಡುಬರುವ ವರ್ಣನಾ ಕೌಶಲ್ಯ, ಸಂಭಾಷಣಾ ಚಾತುರ್ಯ, ಭಕ್ತಿಯ ಬುಗ್ಗೆ, ತತ್ತ್ವ ನಿರೂಪಣೆ, ಅರ್ಥಪುಷ್ಟಿ, ಕಾವ್ಯ ಸೌಂದರ್ಯ, ಆಡು ಭಾಷೆಯ ಸಮರ್ಥ ಬಳಕೆ, ಅಪೂರ್ವ ಲಯ, ಮತ್ತು ಮೋಹಕ ನುಡಿಗಟ್ಟು ಓದುಗರನ್ನು ಬೆರಗುಕವಿಸಿಬಿಡುವಷ್ಟು ಅನನ್ಯವಾಗಿವೆ ಓದು-ಬರಹ ಬಾರದ ಸಾಮಾನ್ಯ ಹಳ್ಳಿಯ ಹೆಂಗಸೊಬ್ಬಳು ಇಂತಹ ಉತ್ಕೃಷ್ಟ ಕಾವ್ಯಸೃಷ್ಟಿಗೆ ಕಾರಣ ಕರ್ತಳೆಂಬುದನ್ನು ನಂಬುವುದಕ್ಕೇ ಕಷ್ಟವಾಗುತ್ತದೆ "ಕಿಮಲಭ್ಯಂ ಭಗವತಿ ಸುಪ್ರಸನ್ನೇ ಶ್ರೀನಿಕೇತನೇ" ಎಂಬ ನುಡಿಯಂತೆ ಭಗವಂತನ ಅನುಗ್ರಹವಾದರೆ ಎಂತಹ ಸಿದ್ಧಿ-ಸಾಧನೆಗಳು ಸಾಧ್ಯವಾಗುತ್ತವೆ ಎಂಬುದಕ್ಕೆ ಭೀಮವ್ವನ ಕೃತಿಗಳೇ ಸ್ಪಷ್ಟ ನಿದರ್ಶನ

ಭೀಮವ್ವ ತನ್ನ ಬದುಕಿನ ಮೇಲೆ ಬೆಳಕು ಚೆಲ್ಲಿದ ವೈಷ್ಣವ ಸಂಪ್ರದಾಯದ ಗುರುಗಳಿಂದ ಹಿಡಿದು ಗಣಪತಿ, ಶಿವ, ಹನುಮಂತ, ಲಕ್ಷ್ಮೀದೇವಿ, ಪಾಂಡುರಂಗ ವಿಠಲ, ತಿರುಪತಿ ವೆಂಕಟೇಶ, ಶ್ರೀಕೃಷ್ಣ ಮುಂತಾದ ದೇವತೆ

ಗಳನ್ನು ಕುರಿತು ಕೀರ್ತನೆಗಳನ್ನು ರಚಿಸಿರುವುದು ಕಂಡುಬರುತ್ತದೆ ತೀರ್ಥಕ್ಷೇತ್ರ ಗಳಿಗೆ ಹೋದಾಗ ಸ್ಫೂರ್ತಿಹೊಂದಿ ಗಂಗೆ, ಸರಸ್ವತಿ ಗೋದಾವರಿ ಮೊದಲಾದ ನದಿಗಳನ್ನು ಹಾಗೂ ಆಯಾ ಕ್ಷೇತ್ರ ಮೂರ್ತಿಗಳನ್ನು ವರ್ಣಿಸಿರುವ ಕೀರ್ತನೆ ಗಳೂ ಇವೆ

ಹರಿದಾಸ ಶ್ರೇಷ್ಠರಾದ ಮೊದಲಕಲ್ಲು ಶೇಷದಾಸರ ಮೇಲೆ ಸ್ಮರಿಸಿ ಬದು ಕಿರೋ ಸರ್ವಾನಂದ ಗುರುಗಳ ಎಂಬ ಕೀರ್ತನೆಯನ್ನು ರಚಿಸಿ ಅವರ ಮಹಿಮೆ ಯನ್ನು ಭೀಮವ್ವ ಕೊಂಡಾಡುತ್ತಾಳೆ

"ಹರಿಯು ದಿವ್ಯಾಸಿಕೆಯು ನಾಮ ಗುರು ವಿಜಯರಾ–
ಯರ ಪ್ರೇಮ ಪಡೆದು ಭೀಮೇಶ ಕೃಷ್ಣನಂಘ್ರಿ ಬಿಡದೆ ಭಜನೆ
ಮಾಡುವವರ'

ಎಂದು ಶೇಷದಾಸರ ಹೆಸರನ್ನು ಹೇಳುವಾಗಲೂ ಶ್ರೀಹರಿಯ ಮಹಿಮಾ ವಿಶೇಷ ಗಳನ್ನು ಅವಳು ಸಂಭ್ರಮದಿಂದ ಸ್ಮರಿಸುತ್ತಾಳೆ

ಮಂತ್ರಾಲಯದ ಶ್ರೀ ರಾಘವೇಂದ್ರ ಗುರುಗಳನ್ನು ಕುರಿತು ಭೀಮವ್ವ ಮಾಡಿರುವ ಕೃತಿ ತುಂಬಾ ಮುದ್ದಾಗಿದೆ ತುಂಗಭದ್ರಾತೀರದ ಮಂತ್ರಾಲಯ ಕ್ಷೇತ್ರದಲ್ಲಿ ನಿಂತು, ಕಂತುಪಿತ ಸೀತಾಪತಿಯ ಅನಂತ ಗುಣಗಳನ್ನು ಅಂತರಂಗದಲ್ಲಿ ಸ್ತೋತ್ರ ಮಾಡುತ್ತಾ, ಭಜಿಸಿ ಬರುವ ಭಕ್ತರ ಅನೇಕ ಚಿಂತೆಗಳನ್ನು ಪರಿಹರಿಸಿ ಅವರಿಗೆ ಮಂತ್ರಾಕ್ಷತೆಯ ಫಲ ನೀಡುತ್ತಾ ಭೂತಳದಿ ಮೆರೆಯುತ್ತಿರುವ ರಾಯ ರನ್ನು ಭೀಮವ್ವ ನೋಡಿರಿ ರಾಘವೇಂದ್ರರ ಮಾಡಿರಿ ನಮಸ್ಕಾರ ಎಂಬ ಮೂರು ನುಡಿಗಳ ಕೀರ್ತನೆಯಲ್ಲಿ ಶ್ರದ್ಧಾಭಕ್ತಿಯಿಂದ ಸ್ತುತಿಸುತ್ತಾಳೆ

ಭೂತ ಪ್ರೇತ ಭಯಗಳ ವಾತಪಿತ್ತ ವ್ಯಾದಿಗಳ
ಶ್ವೇತ ಕುಷ್ಠರೋಗಗಳ ಪಾತಕಿಯರ ಪಾಪಗಳ
ಪ್ರೀತಿಯಿಂದ ಕಳೆವರ ಪ್ರಖ್ಯಾತರಾಗಿ ಬೆಳೆವರ

ಎನ್ನುವ ನುಡಿಯಲ್ಲಿ ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಮಹಿಮೆ ಮತ್ತು ಅವರ ಅಸೀಮ ಕಾರುಣ್ಯವನ್ನು ಸುಂದರವಾಗಿ ಹಿಡಿದಿಟ್ಟಿದ್ದಾಳೆ

ಸೋಂದಾ ಕ್ಷೇತ್ರದಲ್ಲಿ ಸನ್ನಿಹಿತರಾಗಿರುವ, ಪಂಚಬೃಂದಾವನಗಳ ಮಧ್ಯೆ ವಿರಾಜಮಾನರಾಗಿರುವ ಶ್ರೀ ವಾದಿರಾಜ ಸ್ವಾಮಿಗಳ ಬೃಂದಾವನವನ್ನು ಕಂಡ ತಕ್ಷಣ ಭೀಮವ್ವನಿಗೆ ಮೈ ಮರೆಯುತ್ತದೆ ನೇಮನಿಷ್ಠೆಯಿಂದ ಸೇವೆ ಸಲ್ಲಿಸುವ ಜನರಿಗೆ ಬೀಮೇಶಕೃಷ್ಣನ ದಯದಿಂದ ಬೇಡಿದ ಇಷ್ಟಾರ್ಥಗಳನ್ನು ನೀಡುವ ಅವರನ್ನು ಮತಿಹೀನರಿಗೆ ಗತಿಯ ಕೊಡುವ ಪೃಥ್ವಿಗಧಿಕ ಗುರುಗಳು' ಎಂದು ಭಕ್ತಿ ಪಾರವಶ ದಿಂದ ಕೊಂಡಾಡುತ್ತಾಳೆ

ಮಳಖೇಡದ ಶ್ರೀ ಜಯತೀರ್ಥರನ್ನು ಕುರಿತು ಮಾಡಿರುವ ಕೀರ್ತನೆಯಲ್ಲಿ ಬೀಮವ್ವ ಅವರ ಜೀವನ ವೃತ್ತಾಂತವನ್ನು ಸುಂದರವಾಗಿ ತೆರೆದಿಡುತ್ತಾಳೆ ಇಲ್ಲಿ ಅವಳ ಕದನ ಕೌಶಲ ಎದ್ದು ಕಾಣುತ್ತದೆ ದ್ವೈತಮತ ಸ್ಥಾಪಕರಾದ ಶ್ರೀ ಮಧ್ವಾಚಾರ್ಯರ ಗ್ರಂಥಗಳಿಗೆ ಟೀಕೆ ಬರೆದ ಜಯರಾಯರಿವರು ಎಂದು ಹೇಳಿ ಪತಿತರನೆ ಪಾವನವ ಮಾಡಿ ಸದ್ಗತಿಯ ಕೊಡುವ ಸಜ್ಜನ ಶಿರೋಮಣಿ ಎಂದು ಅವರನ್ನು ಸ್ತೋತ್ರಮಾಡುತ್ತಾಳೆ

**ಮಕ್ಕಳಿಗೂ ದಕ್ಕುವ ರಚನೆ**

ಎಲ್ಲಕ್ಕೂ ಮೊದಲು ವಿಘ್ನನಾಶಕನಾದ ವಿನಾಯಕನನ್ನು ಸ್ತುತಿಸುವ ಸಂಪ್ರದಾಯವನ್ನು ಭೀಮವ್ವ ಉಳಿಸಿಕೊಂಡು ಬಂದಿದ್ದಾಳೆ ಗಣಪತಿಯನ್ನು ಪ್ರಾರ್ಥಿಸುವ ಪ್ರತ್ಯೇಕ ಕೀರ್ತನೆಗಳು ಅವಳ ಕೃತಿಗಳಲ್ಲಿ ಕಂಡುಬರದಿದ್ದರೂ ಭೀಮವ್ವ ತನ್ನ ದೊಡ್ಡ ಹಾಡುಗಳ ಮತ್ತು ವಿಶೇಷ ಕೀರ್ತನೆಗಳ ಪ್ರಾರಂಭಕ್ಕೆ ಗಣನಾಯಕನನ್ನು ಶ್ರದ್ಧಾ ಭಕ್ತಿಗಳಿಂದ ವಂದಿಸುತ್ತಾಳೆ

ಗಜಮುಖ ಗಣಪಗೆ ನಮೋ ನಮೋ
ತ್ರಿಜಗದೊಳು ಪೂಜಿಪ ನಮೋ ನಮೋ
ಗಜಮುಖ ಗಣಪಗೆ ನಮೋ ನಮೋ ॥ ಪ ॥

ಸಿದ್ಧಿ ವಿನಾಯಕ ನಮೋ ನಮೋ
ವಿದ್ಯಾ ಪ್ರದಾಯಕ ನಮೋ ನಮೋ
ಲಡ್ಡಿಗೆ ಮೋದಕ ನಮೋ ನಮೋ
ನೈವೇದ್ಯ ಕರ್ಪಿಸುವೆನು ನಮೋ ನಮೋ ॥ ೧ ॥

ಹರನ ಕುಮಾರನೆ ನಮೋ ನಮೋ
ಗಿರಿಜೆಯ ವರಪುತ್ರ ನಮೋ ನಮೋ
ಹರಿಕಥೆಗಳ ಕೇಳ್ವೆ ನಮೋ ನಮೋ
ವರಮತಿ ಪಾಲಿಸೋ ನಮೋ ನಮೋ ॥ ೨ ॥

ಆಕಾಶಕಭಿಮಾನಿ ನಮೋ ನಮೋ
ಮೂಷಿಕವಾಹನ ನಮೋ ನಮೋ
**ಭೀಮೇಶಕೃಷ್ಣನ** ಕಥೆ ನಮೋ ನಮೋ
ಸಂತೋಷದಿ ಪೇಳ್ವೆನು ನಮೋ ನಮೊ ॥ ३ ॥

ಹೀಗೆ ಪತಿದಾನ ಕೊಟ್ಟ ಹಾಡಿನ ಪ್ರಾರಂಭಕ್ಕೆ ಬರುವ ಗಣಪತಿ ಪ್ರಾರ್ಥನೆ ಭೀಮವ್ವನ ಸರಳ ಶೈಲಿಗೆ ಉದಾಹರಣೆಯಾಗಿದೆ ಚಿಕ್ಕಮಕ್ಕಳಿಗೂ ದಕ್ಕುವಂತಹ ಕಾವ್ಯ ರಚನೆಯಲ್ಲಿ ಭೀಮವ್ವ ನಿಸ್ಸೀಮಳು

ಹಸ್ತಿಮುಖದ ಗಣಪತಿ, ರುದ್ರಕುಮಾರ, ಉಮಾಸುತ, ಸಿದ್ಧಿವಿನಾಯಕ, ಹರಕುಮಾರ ಸರ್ಪಭೂಷಣ ಸುತ ನೀಲಕಂಠನ ಸುತ, ಏಕದಂತ, ಕರಿಮುಖದ ಗಣಪತಿ" ಮುಂತಾದ ಪದಗಳ ಪ್ರಯೋಗ ಮಾಡಿ ಗಣಪತಿಯ ಹೆಸರನ್ನು ಒಳ ಸುವುದರಲ್ಲಿಯೂ ಭೀಮವ್ವ ವೈವಿಧ್ಯತೆಯನ್ನು ಪ್ರದರ್ಶಿಸುತ್ತಾಳೆ

ಕೈಲಾಸಪತಿಯಾದ ಈಶ್ವರನನ್ನು ಸ್ತೋತ್ರ ಮಾಡುವುದೆಂದರೆ ಭೀಮವ್ವನಿಗೆ ಇನ್ನಿಲ್ಲದ ಉತ್ಸಾಹ ಬರುತ್ತದೆ ಕಾಶಿ ವಿಶ್ವೇಶ್ವರನೂ, ಸೇತು ಶ್ರೀ ರಾಮಲಿಂಗ ನೂ, ಹಂಪೆಯಲ್ಲಿ ವಾಸವಾಗಿರುವವನೂ ಆದ ಆ ಗಂಗಾಧರನನ್ನು ಪಾರ್ವತಿ ನಾಥ ತ್ರಿನೇತ್ರ ಎನ್ನ ಭೀತಿ ಬಿಡಿಸೋ" ಎಂದು ಕೇಳಿಕೊಳ್ಳುತ್ತಾಳೆ ಲಕ್ಷ್ಮೀ ನರಸಿಂಹನ ಭಕ್ತನೂ, ಪರಮವೈಷ್ಣವನೂ ಆಗಿರುವ ಭವಾನಿಪತಿಯ ಪಾದಗ ಳನ್ನು ಹಿಡಿದು ಭೀಮೇಶಕೃಷ್ಣ"ನನ್ನು ತೋರಿಸಬೇಕೆಂದು ಮೊರೆಹೋಗುತ್ತಾಳೆ

**ಸಂಭಾಷಣಾ ಚಾತುರ್ಯ**

ಭೀಮವ್ವನ ಸಂಭಾಷಣಾ ಶೈಲಿ ತುಂಬಾ ಮೋಹಕವಾದದ್ದು ಸರಳವಾದ ಆಡುಭಾಷೆಯನ್ನು ಬಳಸಿ ಅವಳು ಹಲವಾರು ಪೌರಾಣಿಕ ಪಾತ್ರಗಳಿಗೆ ಜೀವ

ತುಂಬುತ್ತಾಳೆ ಈಶ್ವರ–ಪಾರ್ವತಿಯರ ಸಂವಾದ ಸತ್ಯಭಾಮಾ–ಪಾರ್ವತಿಯರ ಸಂವಾದ, ಅರ್ಜುನ–ದ್ರೌಪದಿಯರ ಸಂವಾದ, ರುಕ್ಮಿಣಿ–ಸತ್ಯಭಾಮೆಯರ ಸಂವಾದ, ಕೃಷ್ಣ–ರುಕ್ಮಿಣಿಯರ ಸಂವಾದ ಮುಂತಾದವುಗಳಲ್ಲಿ ಕಂಡುಬರುವ ಭೀಮವ್ವನ ನಿರೂಪಣಾಕೌಶಲ್ಯ ಅನನ್ಯವಾದದ್ದು ಅವಳ ಅಪೂರ್ವ ಚಿತ್ರಕಶಕ್ತಿ ಕೇಳುವವರನ್ನು ಮಂತ್ರಮುಗ್ಧಗೊಳಿಸಿ, ಪೌರಾಣಿಕ ಪಾತ್ರಗಳಲ್ಲಿ ತಮ್ಮನ್ನು ತಾವು ಕಂಡುಕೊಳ್ಳುವ ದಿವ ಅನುಭವವನ್ನು ನೀಡುತ್ತದೆ

ಭೀಮವ್ವ ರಚಿಸಿರುವ ಈಶ್ವರನಿಗೆ ಪಾರ್ವತಿದೇವಿ ಬಾಗಿಲು ಕಟ್ಟಿದ ಹಾಡು" ಸ್ವಾರಸ್ಯಪೂರ್ಣವಾಗಿದೆ

ಇಂದುವದನೆ ಪಾರ್ವತಿಯೆ ನಾ ಇಲ್ಲಿಗೆ ಬಂದೆನು ಬಾಗಿಲು ತೆಗೆಯೆ ಜಾಣೆ ಎಂದು ಶಿವನು ಪಾರ್ವತಿಯನ್ನು ಬಾಗಿಲು ತೆಗೆಯಲು ಕೇಳುತ್ತಾನೆ ಆಗ ಪಾರ್ವತಿ–

ಬಂದವರ್ಯಾರೀ ವ್ಯಾಳದಿ ಬಾಗಿಲು ಬಂದು ತೆಗಿಯೋರಾ ರಿಲ್ಲ ಎನ್ನುತ್ತಾಳೆ

ಕುಸುಮಲೋಚನೆ ಕೇಳೆ ಪಶುಪತಿ ನಾ ಬಂದೆ ಕುಶಲದಿ ಬಾಗಿಲು ತೆಗೆಯೆ ಜಾಣೆ" ಎಂದು ಶಿವ ನುಡಿದಾಗ–

"ಪಶುಗಳಿಗೆಲ್ಲ ಪತಿ ಯಾದರೆ ನಿನ್ನ ಕೊಂಬು ಹಸನಾಗಿ ತೋರಿಸು ಎಂದು ಕೇಳುತ್ತಾಳೆ

ಸರ್ಪಶರೀರದಲ್ಲಿ ತ್ತಿಕೊಂಡಿರುವಂಥ ಶ್ರೇಷ್ಠ ಶಿವನು ನಾ ಬಂದೀನೆ" ಎಂದು ಶಿವ ಬಾಗಿಲು ತೆರೆಯಲು ಹೇಳುತ್ತಾನೆ

ಸರ್ಪಸೇರಿರುವಂಥ ಹುತ್ತ ನೀನಾದರೆ ಇತ್ತ ಬರುವೋದುಚಿತವಲ್ಲ ಪೋಗೋ ಎಂದು ಪಾರ್ವತಿ ಉತ್ತರಿಸುತ್ತಾಳೆ

ಕಾಂತೆ ಪಾರ್ವತಿ ನೀಲಕಂಠನಾ ಬಂದೀನಿ ಸಂತೋಷದಿ ಬಾಗಿಲು ತೆಗೆಯೆ" ಎಂದು ಶಿವ ಗೋಗರೆಯುತ್ತಾನೆ

ಪಾರ್ವತಿ ಸೋಲುವುದಿಲ್ಲ

ಕಂರದೊಳಗೆ ಕಪ್ಪಿದ್ದರೆ ನೀ ನವಿಲಂತೆ ಕುಣಿದು ತೋರಿಸೆನೆಗೆ ಎನ್ನುತ್ತಾಳೆ

ಹೀಗೇ ಶಿವ_ಪಾರ್ವತಿಯರ ಸಂಭಾಷಣೆ ಮುಂದುವರಿಯುತ್ತದೆ ಕಡೆಗೆ ಶಿವ ಪಾರ್ವ_ಿಗೆ ಸೋತು_

ಮಾತಿಗೆ ಮಾತನಾಡುವೋರೆ ಪಾರ್ವತಿ ಕೇಳೆ
ಮೂಕನಂತಿರುವೆನೆ ನಾನು ಇನ್ನು
ಮೂಕನಂತಿರುವೆನೆ ನಾನು

ಎಂದಾಗ ಪಾರ್ವತಿ

ಮೂಕನಂತಿರುವುದ್ವಿವೇಕ ಭೀಮೇಶ
ಕೃಷ್ಣನ ಕರುಣಕೆ ಪಾತ್ರನಾದ ನಿನಗೆ
ನಾ ಕ್ಷೆಯ ಮುಗಿವೆ ಎಾ ನೀನು

ಎಂದು ಸಂತೋಷದಿಂದ ಎಾಗಿಲನ್ನು ತೆರೆದು ಶಿವನನ್ನು ಬರಮಾಡಿಕೊಳ್ಳುತ್ತಾಳೆ

**ಅಪೂರ್ವ ಲಯ**

ಇದೇ ರೀತಿ ಎೀಮವ್ವ ರಚಿಸಿರುವ ಆರತಿ ಹಾಡುಗಳು ಸಹ ತುಂಬಾ ಜನಪ್ರಿಯವಾಗಿವೆ ಹಬ್ಬ-ಹರಿದಿನಗ_ಲ್ಲಿ ಮದುವೆ ಮುಂಜಿ ಮುಂತಾದ ಶುಭ ಸಂದರ್ಭಗಳಲ್ಲಿ ಸಂಪ್ರದಾಯಸ್ಥ ಹೆಂಗಳೆಯರು ಆವಳ ಆರತಿ ಹಾಡುಗಳನ್ನು ಸುಶ್ರಾವ್ಯವಾಗಿ ಹಾಡುವುದನ್ನು ಕಾಣಬಹುದು

ಆರತಿ ಮಾಡೆ ನೀರೆ, ಬಾರತಿಗಾರತಿ ಮಾಡೆ ನೀರೆ
ಮಾರುತಿ ಸತಿಯಾದ ದ್ರೌಪದಿದೇವ್ಯೆರಿಗಾರತಿ ಮಾಡೆ ನೀರೆ

ಭಾರತಿದೇವಿಗೆ ಆರತಿ ಮಾಡುವ ಈ ಹಾಡಿನಲ್ಲಿ ಕಂಡುಬರುವ ಅಪೂರ್ವ ಲಯ ಭಾವುಕರನ್ನು ಪುಳಕಿತಗೊಳಿಸುತ್ತದೆ ಮಂಗಳಗೌರಿ, ರುಕ್ಮಿಣಿ ಸತ್ಯಭಾಮಾ, ಮಹಾಲಕ್ಷ್ಮಿ, ಶ್ರೀಕೃಷ್ಣ ಮುಂತಾಗವರನ್ನು ಕುರಿತು ಭೀಮವ್ವ ಅನೇಕ ಆರತಿ ಹಾಡುಗಳನ್ನು ರಚಿಸಿದ್ದಾಳೆ

ಪ್ರಾಣದೇವರೆನಿಸಿದ ಹನುಮಂತನನ್ನು ಎಷ್ಟು ಪರಿಯಾಗಿ ಹೊಗಳಿದರೂ ಬೀಮವ್ವನಿಗೆ ತೃಪ್ತಿಯಾಗುವುದಿಲ್ಲ ಹನುಮಂತನೇ ಭೀಮಸೇನನಾಗಿ ಬಂದು ಶ್ರೀಕೃಷ್ಣನ ಸೇವೆ ಮಾಡಿ ನಂತರ ಕಲಿಯುಗದಲ್ಲಿ ಶ್ರೀ ಮಧ್ವಾಚಾರ್ಯರಾಗಿ ಅವತರಿಸಿ ತತ್ವವಾದವನ್ನು ಬೆಳಕಿಗೆ ತಂದರೆಂದು ನಾನಾ ರೀತಿಯಲ್ಲಿ ಹಾಡಿ ಕೊಂಡಾಡುತ್ತಾಳೆ ವಾಯುದೇವರ ಅವತಾರ ವರ್ಣನೆಯನ್ನು ಕುರಿತು ಮಾಡಿ ರುವ ಕೀರ್ತನೆಗಳು ತುಂಬಾ ಪ್ರಶಸ್ತವಾಗಿವೆ

"ತಿರುವಿದಿಯಾ ಮೋರೆ ತಿರುವಿದಿಯಾ ಹನುಮಾ
ತಿರುವಿದಿಯಾ || ಪ ||

ದಂಡಕವನ ಕೊ ದಂಡರಾಮರ ಪಟ್ಟ-
ದ್ಹೆಂಡತಿ ಚೋರನ್ನ ತ್ತುರುಂಡ ನೋಡದೆ || ೧ ||

ತರಳೆ ದ್ರೌಪದಿ ಸಭೆಗೆಳೆದು ಉಟ್ವಸನ ಸೆಳೆದ
ಕೌರವರೆಂಬೋ ದುರುಳರ ನೋಡದೆ || ೨ ||

ಮಧ್ವ ಮತರ್ಗಳೆಂಬೋ ಮರದ ಹಣ್ಣನು ಮೆದ್ದು
ಮುದ್ದು ಬೀಮೇಶಕೃಷ್ಣ ಎನ್ನದವರ ನೋಡಿ || ೩ ||

ತನ್ನ ಮುಖವನ್ನು ತಿರುಗಿಸಿ ನಿಂತಿರುವ ಹನುಮಂತನನ್ನು ಹೀಗೆ ಸುಂದರವಾಗಿ ವರ್ಣಿಸಿರುವ ಬೀಮವ್ವನಿಗೆ ಬೊಮ್ಮಾಗಟ್ಟಿಯಲ್ಲಿರುವ ಪ್ರಾಣದೇವರಲ್ಲಿ ವಿಶೇಷ ಭಕ್ತಿ ಅನೇಕ ಬಾರಿ ಬೊಮ್ಮಾಗಟ್ಟಿ ಕ್ಷೇತ್ರವನ್ನು ಸಂದರ್ಶಿಸಿರುವ ಆಕೆ ಅಲ್ಲಿ ನೆಲೆ ಸಿರುವ ಹನುಮಂತ ದೇವರನ್ನು ಕುರಿತು ಹಲವಾರು ಕೀರ್ತನೆಗಳನ್ನು ರಚಿಸಿದ್ದಾಳೆ

ಮಾಯಾವಾದಿಯ ಮುರಿದೊತ್ತಿದ ತಾ ಮಧ್ವ-
ರಾಯರಾಗಿ ರಜತಪೀಠಪುರದಲ್ಲೆ
ಭೀಮೇಶಕೃಷ್ಣನ್ನ ನಿಲಿಸಿ ಬಂದೀ ಬೊಮ್ಮ
ಗ್ರಾಮದಿ ನಿಂತನೆ ಸೀತಾರಾಮರ ಸಹಿತವಾಗಿ"

ಎಂದು ಕೊಂಡಾಡಿದ್ದಾಳೆ

ಲಕ್ಷ್ಮೀದೇವಿಯನ್ನು ಭೀಮವ್ವ ಸ್ತುತಿಸುವ ಶೈಲಿಯೇ ಒಂದು ಸೊಗಸು

ನೇಮದಿಂದಲಿ ನಮಿಸುವೆನು ನಿನಗೆ ಮಾಲಕ್ಷ್ಮಿತಾಯಿ
ಪ್ರೇಮದಿಂದಲಿ ಪಾಲಿಸಿ ನೀನು
ಶ್ಯಾಮವರ್ಣನ ದಿವ್ಯ ಸಾಸಿರ
ನಾಮ ನಾಲಿಗೆಲಿರಲು ನಿಲಿಸಿ
ಭೂಮಿಗೊಡೆಯ ಬೀಮೇಶಕೃಷ್ಣನ
ಧಾಮದ ದಾರಿಗಳ ತೋರಿಸೇ

ಎಂದು ಪಕ್ಷಿವಾಹನನ್ವಕ್ಷಸ್ಥಳದಲ್ಲಿ ಆವಾಸವಾಗಿರುವ ಲಕ್ಷ್ಮೀದೇವಿಯನ್ನು ಸೆರಗೊಡ್ಡಿ ಬೇಡುತ್ತಾಳೆ

ಕೊಲ್ಲಾಪುರದಲ್ಲಿ ನೆಲೆಸಿರುವ ಲಕ್ಷ್ಮಿಯನ್ನು ಕುರಿತು ನಿಲ್ಲೆ ನಿಲ್ಲೆ ಕೊಲ್ಲಾಪುರದೇವಿ, ಇಲ್ಲೆ ಬಾರೆ ಗೆಜ್ಜೆ ಘಿಲ್ಲೆನುತ ಎಂದು ರಚಿಸಿರುವ ಕೀರ್ತನೆ ಸುಂದರವಾಗಿದೆ ಕೊಲ್ಲಾಪುರ ಲಕ್ಷ್ಮಿಯನ್ನು ಕುರಿತು ಭೀಮವ್ವ ಇನ್ನೂ ಕೆಲವು ಕೀರ್ತನೆಗಳನ್ನು ರಚಿಸಿದ್ದಾಳೆ

## ರಮ್ಯ ಚಿತ್ರಣ

ಶ್ರೀಹರಿಯನ್ನು ಕುರಿತು ಭೀಮವ್ವ ಮಾಡಿರುವ ಕೀರ್ತನೆಗಳು ಮನಸೆಳೆಯುವ ಶೈಲಿಯಲ್ಲಿ ಒಡಮೂಡಿವೆ ಶ್ಯಾಮಲವರ್ಣದ ಬಾಲಗೋಪಾಲನ ಹಾವಳಿ, ಗೋಪಿಯರ ಸಂಗಡ ಅವನು ನಡೆಸಿದ ಪುಂಡಾಟ ಮುಂತಾದವುಗಳು ತುಂಬಾ ರಮ್ಯವಾಗಿ ಚಿತ್ರಿತವಾಗಿವೆ ಶ್ರೀಕೃಷ್ಣನನ್ನು ಬಿಟ್ಟಿರಬೇಕಾದ ಸಂದರ್ಭಗಳಲ್ಲಿ ಗೋಪಿಯರಿಗಾದ ವೇದನೆ, ಪರಿತಾಪ, ತುಮುಲಗಳನ್ನು ವರ್ಣಿಸುವಾಗ ಭೀಮವ್ವ ತನ್ನನ್ನೇ ಒಬ್ಬ ಗೋಪಿಕಾಸ್ತ್ರೀಯಂತೆ ಭಾವಿಸಿಕೊಂಡು ಆ ಭಾವನೆಯಲ್ಲಿ ತೇಲಿಹೋಗಿದ್ದಾಳೆ

ಅತಿಕ್ರೂರನೆನಿಸುವಕ್ರೂರ ಬಂದು ನಮಗ–
ಹಿತ ಮಾಡಿ ಪೋದನಲ್ಲೋ
ಮತಿಹೀನರಾಗ್ಹರಿಯ ರಥವ ನಿಲಿಸದಲೆ ಮುಂ–
ದೇನವರಿಯದೆ ನಿಂತೆವೊ
ಪೃಥಿವಿ ಒಳಗಿಂಥ ಗೋಪಿಕಾಸ್ತ್ರೀಯರೆಂದು ಬಾಳಪ–
ಕೀರ್ತಿಗೊಳಗಾದೆವೋ ಉದ್ಧವ

ಎಂದು ಮಧುರೆಗೆ ಹೋದ ಕೃಷ್ಣನನ್ನು ನೆನೆಸಿಕೊಂಡು ಪ್ರಲಾಪಿಸಿದ್ದಾಳೆ

ಆ ಮುರಳೀಮೋಹನನನ್ನು ಬಿಟ್ಟಿರಲು ಸಾಧ್ಯವಾಗದೆ–

ಬಾರೋ ಬಾರೋ ಭಾಗ್ಯದ ಸಿರಿನಲ್ಲ
ಕೇಳುತಲನ ಸೊಲ್ಲ ।
ಬಾರೋ ಬಾರೆನುತಲಿ ಭಕ್ತವತ್ಸಲನೆ
ಬಾರಿಬಾರಿಗೆ ನಿನ್ನ ಬೇಡಿಕೊಂಬೆನೋ

ಎಂದು ಕೂಗಿ ಕರೆದಿದ್ದಾಳೆ ಹೃತ್ತಾಪ ತಡೆಯಲಾರೆನೆಂದು ಹಂಬಲಿಸಿದ್ದಾಳೆ

ತಿರುಪತಿಯ ವೆಂಕಟೇಶನನ್ನು ಕೊಂಡಾಡುವುದರಲ್ಲೂ ಭೀಮವ್ವ ಹಿಂದೆ ಬಿದ್ದಿಲ್ಲ ಕಂಡೆ ಕಂಡೆ ಮುಚುಕುಂದ ವರದ ಮುಕುಂದ ಮೂಡಲಗಿರಿ ಗೋವಿಂದನ ಎಂದು ಮೊದಲಾಗುವ ಕೀರ್ತನೆಯಲ್ಲಿ ತಾನು ಕಂಡ ಗೋವಿಂದನ ಗುಣಗಾನ ಮಾಡಿದ್ದಾಳೆ ತಪ್ಪುಗಳೆಲ್ಲಾ ನಿನಗರ್ಪಿಸುವೆ ನಾನೀಗ । ಒಪ್ಪಿಸಿಕೋವೆ ಕೋ ತಿಮ್ಮಪ್ಪ ಕರುಣಾನಿಧಿ ಎಂದು ತಿಮ್ಮಪ್ಪನ ಮುಂದೆ ಮನವನ್ನು ತೋಡಿಕೊಂಡಿದ್ದಾಳೆ

ಇದೇ ರೀತಿ ತಿಮ್ಮಲಾಪುರದ ವೆಂಕಟೇಶ, ಉಡುಪಿಯ ಶ್ರೀಕೃಷ್ಣ, ಪಂಢರಾಪುರದ ಪಾಂಡುರಂಗ ವಿಠಲ, ನಾರಾಯಣ ದೇವರಕೆರೆಯ ಶ್ರೀನಿವಾಸ ಮುಂತಾದ ಕ್ಷೇತ್ರ ಮೂರ್ತಿಗಳನ್ನು ಸ್ತುತಿಸಿದ್ದಾಳೆ

ಇತರ ಹರಿದಾಸರಂತೆ ಭೀಮವ್ವನೂ ಹರಿಯ ದಶಾವತಾರಗಳ ವರ್ಣನೆ ೦ ಎನ್ನು ತನ್ನ ಕೀರ್ತನೆಗಳಲ್ಲಿ ವೈವಿದ ಮಯವಾಗಿ ಮಾಡಿದ್ದಾಳೆ

ವಾರಿಧಿಯೊಳಗೆ ಓಡ್ಯಾಡಿ ನಾರುವುದೇನೋ ಮಂ–
ದರವ ಹೊತ್ತ ನೀ ಧರೆಯಾ ಹೊರುವುದೇನೋ
ಊರು ಬಗೆದು ಕರಳ್ಹಾರ ಹಾಕುವುದೇನು
ದೂರ ಬೆಳೆದು ಸುಳ್ಳ ಪೊರನೆನಿಪದೇನು
ದೂರಾಗಿ ಜನನಿಕೊಂದ ಸ್ವಾರಸ್ಯಗಳೇನು
ನಾರುಟ್ಟಾರಣ್ಯದಿ ನಾರಿಬಿಡುವುದೇನು ಅ–
ಪಾರ ಹೆಂಡಿರ ಸಂಸಾರ ಘೋರವಿದೇನು
ಜಾರಾಗಿ ಜನಕೆ ಶರೀರ ತೋರುವುದೇನು
ಕ್ರೂರ ಕಲಿಗಳ ನೀ ಸಂಹಾರ ಮಾಡುವುದೇನು
ಧೀರ ನಮ್ಮೆದುರು ನಿಲ್ಲವಾರದೇನು
ಮಾರಜನಕ ಭೀಮೇಶಕೃಷ್ಣನೆ
ಮರೆಯಾಗಿದ್ದರೇನೋ ಮರೆಯದಂತಿರೋ

ಹೀಗೆ ತನ್ನ ಸುಳಾದಿಯೊಂದರಲ್ಲಿ ಶ್ರೀಹರಿಯ ದಶಾವತಾರದ ವಿವರಗಳನ್ನು ಚೊಕ್ಕವಾಗಿ ಸಂಗ್ರಹಿಸುವ ಭೀಮವ್ವ ತನ್ನನ್ನು ತಾನು ತೂಗಿನೋಡಿ ಆತ್ಮವಿಮರ್ಶೆ ಮಾಡಿಕೊಳ್ಳುವ ಕೆಲವು ಹಾಡುಗಳನ್ನೂ ರಚಿಸಿದ್ದಾಳೆ

ಉಡಬಲ್ಲೆ ಉಣಬಲ್ಲೆ ಉತ್ತಮಸಂಗ ಬಿಡಲೊಲ್ಲೆ
ನಡೆಯಬಲ್ಲೆನೋ ದುರ್ಮಾರ್ಗದಿಂದ
ಕಡುಕೋಪದಿಂದ ಕಠಿಣ ಮಾತನಾಡಲು ಬಲ್ಲೆ
ಕಡಲಶಯನನ್ನ ನಾಮ ನುಡಿಯಲೊಂದರಿಯೆನೋ

ಎಂದು ಕಲ್ಲು ನಾಯೇನೋ ಕೈವಲ್ಯದಾಯಕನೆ" ಎಂಬ ಕೀರ್ತನೆಯಲ್ಲಿ ಭೀಮವ್ವ ಪರಿತಪಿಸುತ್ತಾಳೆ

ಹೀಗೆ ಭೀಮವ್ವನ ಕೀರ್ತನೆಗಳು ಕವಿ ಹೃದಯದ ಸಹಜ ಸೃಷ್ಟಿಯಾಗಿದ್ದು ಭಕ್ತಿರಸದ ಬುಗ್ಗೆ ಹರಿಸಿ ಭಾವುಕರ ಮನಸ್ಸುಗಳನ್ನು ಪ್ರಫುಲ್ಲಗೊಳಿಸುವಲ್ಲಿ ಸಫಲ ವಾಗಿವೆ

ಭಕ್ತರ ಮನಸ್ಸು ಯಾವಾಗಲೂ ಒಂದೇ ತೆರನಾಗಿರುವುದಿಲ್ಲ ಒಂದೊಂದು ಸಲ ಭಕ್ತಿಯುಕ್ಕಿ ಬಂದಾಗ ಭಾವಪರವಶರಾಗಿ ಪರಮಾತ್ಮನ ಮಹಿಮೆಗಳನ್ನು ಸ್ತೋತ್ರ ಮಾಡುವುದರಲ್ಲಿ ತಲ್ಲೀನರಾಗುತ್ತಾರೆ ಒಮ್ಮೆ ಅವನ ಕಾರುಣ್ಯ, ಭಕ್ತಾನುಕಂಪ ಮುಂತಾದ ಗುಣಗಳನ್ನು ನೆನೆಸಿಕೊಂಡು ಧಾರೆ ಧಾರೆಯಾಗಿ ಕಣ್ಣೀರು ಸುರಿಸುತ್ತಾರೆ ಮತ್ತೊಮ್ಮೆ ಸರ್ವಜ್ಞನಾದ ಆ ಪರಮಾತ್ಮನೆದುರಿನಲ್ಲಿ ಪ್ರಾಮಾಣಿಕವಾಗಿ ತಮ್ಮ ಆತ್ಮಶೋಧನೆಯನ್ನು ಮಾಡಿಕೊಳ್ಳುತ್ತಾರೆ ಆಗ ಅವರಿಗೆ ತಮ್ಮ ಅಂತಃಸ್ಥಿತಿಯ ಬಗ್ಗೆ ಕಳವಳವುಂಟಾಗುತ್ತದೆ ಪುನ ದೇವರಲ್ಲಿಯೇ ಮೊರೆಯಿಡುತ್ತಾರೆ ಆಗ ಅವರ ಹೊಯ್ದಾಟ ಹೇಳತೀರದು

ಭೀಮವ್ವನೂ ಸಹ ತನ್ನ ಕೃತಿಗಳಲ್ಲಿ ಇದೇ ರೀತಿಯ ಕಳವಳವನ್ನು ವ್ಯಕ್ತಪಡಿಸಿರುವುದು ಕಂಡುಬರುತ್ತದೆ ತಡೆಯಲಾರದೆ ಅವಳು ಭೀಮೇಶಕೃಷ್ಣನೆದುರಿಗೆ ಮನಸ್ಸನ್ನು ಬಿಚ್ಚಿ ಮೊರೆಯಿಡುತ್ತಾಳೆ

ಹೊತ್ತು ಹೋಗುತಲಿದೆ । ಮೃತ್ಯು ಕೂಗುತಲಿದೆ
ವ್ಯರ್ಥವಾಗುವುದೋ ಈ ಜನ್ಮ । ಈ ಜನ್ಮ
ನಿನ್ನ ನಾಮದೆತ್ತರವು ಯೆನಗೇ ನಿಲುಕಾದೋ"

ಎಂದು ವ್ಯರ್ಥವಾಗಿ ಹೊತ್ತು ಹೋಗುತ್ತಿರುವುದರ ಬಗ್ಗೆ ಪರಿತಾಪ ಪಡುತ್ತಾಳೆ

ಸ್ತುತಿಮಣಿ ಮಾಲಿಕೆ ಇಂಥದ್ದು ಇದರಲ್ಲಿ ಭೀಮವ್ವನ ಅಂತರಂಗದ ದರ್ಶನ ತುಂಬಾ ಚೆನ್ನಾಗಿ ಆಗುತ್ತದೆ ಅವಳ ಕಳವಳ, ಕಾತುರ, ಆತುರ, ಮುನಿಸು, ಸಂಶಯ, ದೃಢ ನಂಬಿಕೆ ಮುಂತಾದ ಅನೇಕ ಭಾವನೆಗಳ ಬುಗ್ಗೆ ಇಲ್ಲಿದೆ

ಸ್ತುತಿಮಣಿ ಮಾಲಿಕೆ ಭೀಮವ್ವನ ಕೃತಿಗಳಲ್ಲಿಯೇ ವಿಶಿಷ್ಟವಾದದ್ದು ಸುಮಾರು ನೂರಹನ್ನೊಂದು ನುಡಿಗಳಿರುವ ಈ ಕೃತಿ ಸುವ್ವಾಲಿ ಧಾಟಿಯಲ್ಲಿದೆ ರಾಗಬದ್ಧವಾಗಿದ್ದು ಹಾಡಲು ಸೊಗಸಾಗಿದೆ ಭಾಷೆ ಸರಳವೂ, ಸುಂದರವೂ ಆಗಿದ್ದು ಭಕ್ತಿರಸ ಹದವಾಗಿ ಹೆಪ್ಪುಗಟ್ಟಿದೆ ಭಾವುಕ ಮನಸ್ಸನ್ನು ತಣಿಸಿ, ಕುಣಿಸ ಬಲ್ಲ ಆತ್ಮೀಯವಾದ ನುಡಿಗಟ್ಟುಗಳು ಇಲ್ಲಿ ಹೇರಳವಾಗಿವೆ

ಕರಿಮುಖದ ಗಣಪತಿಯ ಚರಣಕ್ಕೆ ಯೆರಗಿ, ಶಾರದೆಗೆ ಸೆರಗೊಡ್ಡಿ ವರ ವನ್ನು ಬೇಡಿ ಕೃತಿಯನ್ನು ಪ್ರಾರಂಭಿಸಿರುವ ಭೀಮವ್ವ ಕೇವಲ ಎರಡು ನುಡಿಗ ಳಲ್ಲಿ ಹದಿನೆಂಟು ಜನ ಋುಷಿಗಳನ್ನು ಸ್ಮರಿಸಿ ವಂದಿಸುತ್ತಾಳೆ

'ಅತ್ರಿ ಅಂಗೀರಸ । ವಸಿಷ್ಠ ಗೌತಮ ವಿಶ್ವಾ
ಮಿತ್ರ ಮಾರ್ಕಂಡೇಯ ಚವ್ಯನಾರು । ಚವನ
ಭಾರದ್ವಾಜ ಶುಕ ಬಕದಾಲ್ಭ್ಯರಿಗೆ ನಮಿಸುವೆ ॥

ಮಾಂಡವ್ಯ ಸೌಭರಿ ಶಾಂಡಿಲ್ಯ ಗಾಲವರು
ಪಂಡಿತ್ವಾಲ್ಮೀಕಿ ಕೌಂಡಿಣ್ಯ । ಕೌಂಡಿಣ್ಯ
ಅಗಸ್ಯ ಮುನಿ ಮರೀಚರಿಗೆ ನಾನು ನಮೋ ಎಂಬೆ॥

ಮನೆ ದೈವವಾದ ತಿರುಪತಿಯ ತಿಮ್ಮಪ್ಪನನ್ನು ಸ್ಮರಿಸುವ ಭೀಮವ್ವನ ಶೈಲಿಯೇ ಒಂದು ಸೊಗಸು

"ಶೇಷಗಿರಿವಾಸ ಆಕಾಶನಳಿಯನೆ ವೆಂಕ
ಟೇಶ ನಮ್ಮ ಮನೆ ದೈವ । ಮನೆ ದೈವ
ಸಲಹೆನ್ನ ಪದ್ಮಾವತೀಶ ಪರಮಾತ್ಮ ॥'

ಆರು ಮಂದಿ ಅರಿಗಳು ಅನುಗಾಲ ನನ್ನನ್ನು ದುರ್ವಿಷಗಳಿಗೆ ಎಳೆದು

ಯಮನ ಬಳಿಗೆ ಕೊಂಡೊಯುಲು ಕಾತುರದಿಂದಿದ್ದಾರೆ ದಶೇಂದ್ರಿಯಗಳ ಮುತ್ತಿಗೆಯಲ್ಲಿ ಬಂಧಿತಳಾಗಿ ಕತ್ತಲ ಕೂಪದಂತಿರುವ ಭವದೊಳಗೆ ಸಿಲುಕಿ ಬಳಲುತ್ತಿದ್ದೇನೆ ಪರಮಾತ್ಮಾ, ನನ್ನ ಸಂಚಿತಾಗಾಮಿಗಳನ್ನು ದಹಿಸು ಈ ಪ್ರಪಂಚವನ್ನು ಎಡಿಸು, ವಂಚನೆಯಿಲ್ಲದೆ ಸಲಹು ಎಂದು ಬೇಡಿಕೊಳ್ಳುವ ಭೀಮವ್ವ–

ಮುಕ್ತಿದಾಯಕ ನಿನ್ನ । ಭಕ್ತರೇಸು ಮಂದಿ
ಹೆತ್ತಾಯಿಸುತರೇನವರೆಲ್ಲಾ । ಅವರು ನಾ
ಹುಟ್ಟಿದೆನೆ ಮತ್ತೆ ಮಲತಾಯಿ ಉದುರದಿ॥

ಎಂದು ಪರಮಾತ್ಮನನ್ನು ಪ್ರಶ್ನಿಸುತ್ತಾಳೆ

ಶ್ರೀಶನೆ ಕೇಳ್ ನಿನ್ನ । ದಾಸರಂಗಳದಲ್ಲಿ
ಬೀಸಿ ಬಿಸಾಕೊ ಎನ್ನನು । ಎನ್ನ ಹರಿದಾಸರ
ದಾಸತ್ವ ಯೆನಗೇ ಕೊಡಿಸಯ್ಯಾ ॥

ಎಂದು ಹರಿದಾಸರ ದಾಸತ್ವವನ್ನು ಕೊಡಿಸಬೇಕೆಂದು ಕೋರುತ್ತಾಳೆ

ಧೃವ, ಪ್ರಹ್ಲಾದ, ಅಜಾಮಿಳ ಸುಧಾಮ, ಬಲಿ, ಪುಂಡಲೀಕ, ಅಕ್ರೂರ, ಮುಚಕುಂದ ಮುಂತಾದವರನ್ನು ಅನುಗ್ರಹಿಸಿದ ವೃತ್ತಾಂತಗಳನ್ನು ತಿಳಿಸಿ ಭಗವಂತನನ್ನು ಹಾಡಿ ಹೊಗಳುವುದರಲ್ಲಿ ಭೀಮವ್ವನಿಗೆ ಎಲ್ಲಿಲ್ಲದ ಸಂಭ್ರಮ

ಮಗ್ಗವ ಹಾಕಿ ಮಾರು । ಬಟ್ಟೆ ನೇದಿಲ್ಲ
ರೊಕ್ಕವನೆ ಕೊಟ್ಟು ತರಲಿಲ್ಲ । ತರಲಿಲ್ಲ ದ್ರೌಪದಿಗೆ
ಲೆಕ್ಕಿಲ್ಲದೊಸ್ತ್ರಾ ಉಡಿಸೀದಿ ॥'

ಹೀಗೆ ಮನಮುಟ್ಟುವ ದೃಶ್ಯಗಳನ್ನು ಮೋಹಕವಾಗಿ ನೇಯುವ ಪೌರಾಣಿಕ ಪಾತ್ರಗಳಿಗೆ ಭೀಮವ್ವ ಜೀವ ತುಂಬುತ್ತಾಳೆ

**ತತ್ವ ಪ್ರತಿಪಾದನೆ**

ಸ್ತುತಿಮಣಿ ಮಾಲಿಕೆಯಲ್ಲಿ ಮಧ್ವಮತ ತತ್ವಗಳ ಸುಂದರ ಸರಮಾಲೆ

ಯನ್ನು ಭೀಮವ್ವ ಪ್ರೋಣಿಸಿಟ್ಟಿದ್ದಾಳೆ ವೇದ ಶಾಸ್ತ್ರ ಪುರಾಣಗಳ ಅಂತರ್ಯಾ ವನ್ನು ಭೀಮವ್ವ ಇಲ್ಲಿ ಚೆನ್ನಾಗಿ ವ್ಯಕ್ತಪಡಿಸಿದ್ದಾಳೆ ಜೀವನ ಅಸ್ವತಂತ್ರತೆ ಮತ್ತು ಶ್ರೀಹರಿಯ ಸಾರ್ವಭೌಮತೆಯನ್ನು ತಿಳಿಸಲು ಆಕೆ ನೀಡಿರುವ ಈ ಉಪಮೆ ತುಂಬಾ ಅರ್ಥಪೂರ್ಣವಾಗಿದೆ

ಆಡಗಿ ಮಾಡುವನ ಕೈ ಹಿಡಿದ ಹುಟ್ಟಿನಂತೆ
ನಡೆಯುದೋ ನಮ್ಮ ಸ್ವಾತಂತ್ರ । ಸ್ವಾತಂತ್ರ
ಮೂರ್ಲೋಕ ದೊಡೆಯ ನೀ ಕರ್ತೃ ಜಗಕ್ಕೆಲ್ಲಾ ॥'

ಶ್ರೀ ಮಧ್ವಾಚಾರ್ಯರು ಪ್ರತಿಪಾದಿಸಿದ ಪಂಚಭೇದಗಳನ್ನು ಹೆಸರಿಸುತ್ತಾ "ಎನ್ನೊಳು ಭೇದಬುದ್ಧಿ ಬ್ಯಾಡಿನ್ನು ಎಂದು ಕೇಳಿಕೊಳ್ಳುತ್ತಾಳೆ

ಜೀವ ಜೀವಕು ಭೇದ ಜೀವ ಜಡಕು ಭೇದ
ಜಡ ಜಡಕೆ ಭೇದ ನಿನಗಿನ್ನು । ನಿನಗೆ
ಭೇದಾದರ್ಕೆನ್ನೊಳು ಭೇದಬುದ್ಧಿ ಬ್ಯಾಡಿನ್ನು

ಇಲ್ಲಿ ವ್ಯಕ್ತಗೊಳ್ಳುವ ಆತ್ಮೀಯ ಹಿತ ಸ್ಪಂದನ ತತ್ವವನ್ನೂ ಮೀರಿ ನಿಲ್ಲುತ್ತದೆ

ತಂದೆ ತಾಯಿ ಬಂಧು ಬಳಗ ಬಾಂಧವರೆಲ್ಲಾ ಹಿಂದೆ ಎಷ್ಟೋ ಜನ ಎಣಿಕೆಯಿಲ್ಲದಂತೆ ಆಗಿಹೋಗಿದ್ದಾರೆ ಎಣಿಸಲಿಕ್ಕೇ ಆಗದ ಅವರನ್ನು ನನ್ನವರು ಎಂದು ತಿಳಿದರೆ ಉಪಯೋಗವಿಲ್ಲ ಕನಕ, ಕಶ್ಯಪ ಕುಂಭಕರ್ಣ ದಂತವಕ್ರ ಮುಂತಾದವರು ಮಾಡಿದ ಎಣಿಕೆಯಿಲ್ಲದ ಅಪರಾಧಗಳನ್ನು ಕ್ಷಮಿಸಿ ಸದ್ಗತಿ ನೀಡಿದ ನಾರಾಯಣನೊಬ್ಬನೇ ನನ್ನವನು ಅವನೇ ಎಲ್ಲಕ್ಕೂ ಕಾರಣಕರ್ತ ನಿರ್ದೋಷ, ಸರ್ವಶಕ್ತ ಸರ್ವವ್ಯಾಪ್ತ, ಕರುಣಾಸಮುದ್ರನಾದ ಆತನು ಜೀವರ ಮೇಲೆ ಜೀರಿಗೆಯಷ್ಟು ದಯಮಾಡಿದರೆ ಸಾಕು ವೈಕುಂಠಪತಿಯಾದ ಅವನು ತನ್ನ ಲೋಕದಲ್ಲಿ ಶಮಿಷತ್ರದಷ್ಟು ಸ್ಥಳ ಕೊಟ್ಟರೆ ಸಾಕು ಅಲ್ಲಿ ಚಿತ್ತ ಸ್ವಸ್ಥಾಗಿರ ಬಹುದು, ಎಂದು ಹೇಳುವ ಭೀಮವ್ವ ಅಮಿತಫಲವನ್ನು ನೀಡುವ ಭೀಮೇಶ ಕೃಷ್ಣನ ಕರುಣೆಯೊಂದೇ ಲಕ್ಷಾಭರಣ ಅದೇ ಬದುಕಿಗೆ ಭೂಷಣ ಎಂದು ಕರಗ ಳತ್ತಿ ಸಾರುತ್ತಾಳೆ

## ಒಗಟುಗಳು

ಒಗಟುಗಳನ್ನು ರಚಿಸುವುದರಲ್ಲಿ ಭೀಮವ್ವನದು ಎತ್ತಿದ ಕೈ ಅರ್ಥಗರ್ಭಿತವಾದ ಅವಳ ಒಗಟುಗಳಲ್ಲಿ ಅವಳ ಭಾಷಾಜ್ಞಾನ ಪದಗಳ ಮೇಲಿರುವ ಹಿಡಿತ ನಿರೂಪಣಾ ಸಾಮರ್ಥ್ಯಗಳು ಎದ್ದು ಕಾಣುತ್ತವೆ ದ್ವಿಪದಿಗಳು" ಎಂದು ಹೆಸರಾಗಿರುವ ಈ ಒಗಟುಗಳಲ್ಲೂ ಭಕ್ತಿಯ ಪ್ರಚೋದನೆಯಿದೆ ಶೃಂಗಾರ ರಸದೊಂದಿಗೆ ಹಾಸ್ಯರಸದ ಸ್ಪಂದನವಿದೆ

ಶ್ರೀಕೃಷ್ಣ ಮತ್ತು ರುಕ್ಮಿಣಿಯರು ಸರಸವಾಗಿ ಸಂಭಾಷಣೆಯನ್ನು ನಡೆಸುತ್ತಿದ್ದಾಗ ಪರಸ್ಪರ ಒಗಟುಗಳನ್ನು ಹಾಕಿ ಬಿಡಿಸಲು ಹೇಳುತ್ತಾರೆ ಮೊದಲು ಕೃಷ್ಣನ ಸರದಿ ಕೃಷ್ಣ ರೀತಿಯಿಂದ ಕುಳಿತು ಒಂದು ಒಗಟನ್ನು ಹೇಳುತ್ತಾನೆ

"ಕಿವಿಯಿದ್ದು ಕೇಳದು, ಕಣ್ಣಿದ್ದು ನೋಡದು, ಕಾಲಿದ್ದು ನಡೆಯಲರಿಯದು, ರುಕ್ಮಿಣಿ ನಾರಿ ನೀ ಒಗಟ ಒಡಿಯೆಂದ"

ಆಗ ರುಕ್ಮಿಣಿ

'ಚಂದನದ ಮರ ತರಿಸಿ, ಚೆಂದಾಗಿ ಕೆತ್ತಿಸಿ, ಸಣ್ಣ ಮಕ್ಕಳಾಡಿಸುವಂಥ ಗೊಂಬೆ ಮತ್ತೇನು ಅರಸರೆ" ಎಂದು ತಕ್ಷಣ ಒಗಟನ್ನು ಬಿಡಿಸುತ್ತಾಳೆ

ಕೃಷ್ಣ ಮತ್ತೊಂದು ಒಗಟನ್ನು ಪ್ರಯೋಗಿಸುತ್ತಾನೆ

ಹುಟ್ಟುತ್ತ ಹಸಿರುಂಟು ಬೆಳೆಯುತ್ತ ಕೆಂಪುಂಟು, ಮುಪ್ಪಿನ ಕಾಲಕ್ಕೆ ಅತಿ ಕಪ್ಪು ರುಕ್ಮಿಣಿ ಮಿತ್ರಿ ನೀ ಒಗಟ ಒಡೆಯೆಂದ

ಸಣ್ಣನ್ನ ಎಲಿಯಾಗಿ, ನುಣ್ಣನ್ನ ಕಾಯಾಗಿ, ಹನ್ನೆರಡು ಮಂದಿ ಬೆಲೆ ಯಿಟ್ಟು ಮಾರುವ ನೇರಳೆ ಹಣ್ಣು, ಮತ್ತೇನು ಅರಸರೆ ಎಂದು ಲೀಲಾಜಾಲ ವಾಗಿ ಹೇಳುತ್ತಾಳೆ

ಹೊರಗೆ ಹೊರಳಿ ಕೋಟಿ, ಒಳಗೆ ಬೆಳ್ಳಿ ಕೋಟಿ ತಿಳಿನೀರಿನಾಗ ಅಮೃತವ ರುಕ್ಮಿಣಿ ನಾರಿ ಈ ಒಗಟ ಒಡೆಯೆಂದ

ಅದಕ್ಕೆ ಉತ್ತರವಾಗಿ ರುಕ್ಮಿಣಿ–

ಅಟ್ಟಂಬೋ ಅಡಿವ್ಯಾಗ ಬೆಟ್ಟೆಂಬೋ ಗಿಡಹುಟ್ಟಿ ತುಟ್ಟ ತುದಿಗೆ ನೂರೆಂಟು ಫಲವಾಗಿ ತೆಂಗಿನಕಾಯಿ ಮತ್ತೇನೂ ಅರಸರೆ ಎನ್ನುತ್ತಾಳೆ

ಕೃಷ್ಣ ರುಕ್ಮಿಣಿಯನ್ನು ಸೋಲಿಸಬೇಕೆಂದು ಮತ್ತೆ ಮತ್ತೆ ಒಗಟುಗಳನ್ನು ಹಾಕುತ್ತಾನೆ ಆದರೆ ರುಕ್ಮಿಣಿ ಅವುಗಳನ್ನು ನಿರಾಯಾಸವಾಗಿ ಬಿಡಿಸುತ್ತಾಳೆ

ಕೃಷ್ಣನ ಒಗಟೆಲ್ಲವೂ ಮುಗಿದ ನಂತರ ರುಕ್ಮಿಣಿಯ ಸರದಿ ಬರುತ್ತದೆ ರುಕ್ಮಿಣಿ ಚಮತ್ಕಾರವಾಗಿ ಒಗಟುಗಳನ್ನು ಹೆಣೆದು ಕೃಷ್ಣನಿಗೆ ಬಿಡಿಸಲು ಹೇಳು ತ್ತಾಳೆ ಆದರೆ ಕೃಷ್ಣನಿಗೆ ತಕ್ಷಣ ಹೊಳೆಯುವುದಿಲ್ಲ ಅವನು ತಡವರಿಸುತ್ತಾನೆ ಆಗ ರುಕ್ಮಿಣಿ ಮುಸಿ ಮುಸಿ ನಗುತ್ತಾಳೆ ಕೃಷ್ಣನಿಗೆ ಹುಸಿ ಕೋಪ ಬರುತ್ತದೆ ಅವನು ಬುಸುಗುಟ್ಟುತ್ತಾನೆ

ಒಬ್ಬನ್ನ ಕಟ್ಟಿದ್ದೆ, ಒಬ್ಬನ್ನ ಸುಟ್ಟಿದ್ದೆ ಒಬ್ಬನಿಗೆ ನೀರು ಎರೆದಿದ್ದೆ" ಎಂದು ರುಕ್ಮಿಣಿ ಹೇಳಿದಾಗ ಕೃಷ್ಣನ ಕೋಪ ಹೆಚ್ಚಾಗುತ್ತದೆ

ಯಾವನ್ನ ಕಟ್ಟಿದ್ದೆ, ಯಾವನ್ನ ಸುಟ್ಟಿದ್ದೆ, ಯಾವನಿಗೆ ನೀರು ಎರೆದಿದ್ದೆ ಎನುತಲೆ ಭೀಮೇಶ ಹಿರಿದ ಅಗಲವ" ಕೃಷ್ಣ ಕಿಡಿಕಾರುತ್ತಾ ಖಡ್ಗ ಝಳಪಿಸು ತ್ತಾನೆ

